ತನ್ನ ಮಗಳನಗೆ ಕಿಱಿಯುಂ ಕುಡುವನೆಂದು ನುಡಿದಸೀಗಳ್ ಪೆಱಗೇ ಕೊಟ್ಟಪ್ಪನಿಂದು ಮದುವೆ ನೆರೆವುವೆಂದು ಪೇೞ್ದಾತನುಮಂಯ್ವೊರ್ವರ್ ಸುಭಟರನಾಯ್ದುಕೊಂಡು ಪೊೞಲ್ಗೆವಂದು ಪೊಗವಪಂಗವಿದಿರ್ದ ಕೂಸಂ ಭಟ್ಟಿ ಪುತ್ರಂಗೆ ಕುಡಿಮೆಂದು ಕೀಱಿ ಚಿಲಾತಪುತ್ರಂ ಬೇಡಿದೊಡಂ ಕುಡಿದಿರ್ದೊಡೆ ಮುೞ[1]ದೆ[1]ೞೆದುಕೊಂಡು ಪೋದೊಡೆ ಶ್ರೇಣಿಕ ಮಹಾರಾಜಂಗೆ [2]ಪುಯ್ಯಲಿಟ್ಟೊಡಾತನುಮಾ ಪುಯ್ಯಲಂ ಕೇಳ್ದು ಅನ್ಯಾಯದೊಳ್ ನೆಗೞ್ದಾತನಂ [3]ಕೊಂದು ಕೂಸಂ[3] ಕೊಂಡು ಬನ್ನಿಮೆಂದು ಸಾಮಂತ ಮಹಾ ಸಾಮಂತ ಮಕುಟ ಬದ್ಧರ್ಕಳ್ಗೆ ಬೆಸವೇೞ್ದಡವ[4]ರುಂ ಬೞಿಯ[5]ನೆ[5] ತಗು[6]ಳ್ವ[6]ರನ್ನೆಗಂ ಪೋಗಲ್ ಪಾಂಗಿಲ್ಲದೆ ಚಿಲಾತ ಪುತ್ರಂ ಕನ್ನೆಯುಂ ಕೊಂದನಾಕೆಯುಂ ಸತ್ತು ಪೊೞಲೊಳ್ ವ್ಯಂತರದೇವತೆಯಾಗಿ ಪುಟ್ಟಿ[7]ದ[7]ಳ್ ತಾನುಂ ಬೇಗಂ ಪೋಗಿ ವೈ[8]ಭಾ[8]ರಮೆಂಬ ಪರ್ವತಮನೇಱಿದೊ[9]ನಾ[9] ಪರ್ವತದ ಮೇಗೆ ಸರ್ವಗುಪ್ತನೆಂಬಾಚಾರ್ಯರವಧಿಜ್ಞಾನಿಗಳ್ ಅಯ್ನೂರ್ವರ್[10] ಶಿಷ್ಯರ್ಕಳ್ವೆರಸಿ[10]ರ್ದೊರಂ ಕಂಡು ಬೇಗಮೆನಗೆ ಸಂಕ್ಷೇಪದಿಂ ಧರ್ಮಮಂ ಪೇೞಿಮೆಂದೊಡೆ ಭಟಾರರಿಂತೆಂದು ಪೇೞ್ದರ್

**ಗಾಹೆ** ॥ ಜಂ ಇಚ್ಛಸಿ ತಂ ಣಂತಂ ಜಂಪುಣ ಣೇಚ್ಛಸಿ ತಂ ತುಮುಪ್ಪಂ ।
ಪುರಿಸ ಸೀಹಂ ತ ಇಚ್ಛಸು ಸಂಸಾರ ಮಹಣ್ಣವಂ ತರಿದುಂ ॥

[11]ಮಂತ್ರಂ[11] ಅಭಾವಿದಂ ಭಾವೇಮಿ ಭಾವಿದಂ ಭಾವೇಮಿ ಎಂದಿಂತು ಸಂಕ್ಷೇಪದಿಂದಂ ಧರ್ಮಮಂ ಪೇೞ್ದು ಮತ್ತಮಿಂತೆಂದರ್ ನಿನಗಾಯುಷ್ಯಂ ಕಿಱಿದೆಯೆಂದು ಪೇೞ್ದೊಡಾತನುಮಂತಪ್ಪೊಡೆನಗೆ ದೀಕ್ಷಾಪ್ರಸಾದಂಗೆಯ್ಯಿಮೆಂದು ಬೇಡಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ ತೊಱೆದು ತಪಂ[12]ಬಟ್ಟು[12] ಸವ್ವಸಾವಜ್ಜಜೋಗಂ ವಿರದೋಮ್ಹಿಯೆಂದು ಬಾೞ್ವನ್ನೆಗಮಾಹಾರ ಶರೀರಕ್ಕೆ ನಿವೃತ್ತಿಗೆಯ್ದು [13]ಚಿಲಾತ ಪುತ್ರಂ ತಪಂಬಟ್ಟು[13] ಕಾಯೋತ್ಸರ್ಗಂ ಗೆಯ್ದಿರ್ದೊರ್

ಅನ್ನೆಗಂ ಪೆಱಗಣಿಂ ಬಲಂ [14]ಕೇಳ್ದು[14] ಬಂದು ಕಾಯೋತ್ಸರ್ಗಂ ನಿಂದೊನಂ ಕಂಡೇನುಂಗೆಯ್ಯಲಱಿಯದೆ ಶ್ರೇಣಿಕ ಮಹಾರಾಜಂಗೆ ಚಿಲಾತ ಪುತ್ರಂ ತಪಂಬಟ್ಟು ಕಾಯೋತ್ಸರ್ಗಂ ಗೆಯ್ದಿರ್ದೊನಿನ್ನೆಮಗೆ ಬೆಸನೇನೆಂದು [15]ಬಿನ್ನಪಂ ಗೆಯ್ದು[15]ಟ್ಟಿದೊಡಾತ[16]ನಿಂ[16]ತೆಂದಂ ತಪಂ[17]ಬಟ್ಟಿ[17]ನಪ್ಪೊಡೊಳ್ಳಿತೆಯ್ದುಂ [18]ತನ್ನ ಮುಂಗೆಯ್ದ[18] ಪಾಪಮುಮುಪಶಮಮುಂ ಪೞಿಯುಮಂ ಪೊಲ್ಲಮೆಯು[19]ಮಂ ನೀಗಿದನೆಂದು ನುಡಿದು

1. ದು ಕೂಸನೆ (ಘಚಫ). 2. + ಪೋಗಿ (ಘಚಫ). 3. (ಚ)ದಲ್ಲಿಲ್ಲ. 4. ರ್ (ಘಚಫ). 5. ಂ (ಖಘಚಫ). 6. ಳ್ದ (ಘಫ). 7. ರ್ದ (ಘಫ) 8. ಬಾ (ಖ). 9. ಡಾ (ಘಚಫ). 10. ರುಷಿಯರ್ಕಳು ಬೆರಸು ಮಿ (ಕಗ), ರುಷಿಯರ್ಕಳ್ವೆರಸಿ (ಘಚಫ). 11. (ಕಖಗ)ಗಳಲ್ಲಿಲ್ಲ. 12. ಗೊಂಡು (ಘಫ). 13. ಪ್ರಾಯೋಪಗಮನ ಮರಣದಿಂದ (ಖಘಚ), ಪ್ರಾಯೋಪಗಮನ ವಿಧಿಯಿಂ (ಫ). 14. ಗೂಡಿ (ಘಚಫ)ಗಳಲ್ಲಿಲ್ಲ. 15. ಪೇಳ್ದ (ಘಚಫ). 16. ನುಮಿಂ (ಘಚಫ). 17. ಗೊಂಡ (ಘಚಫ). 18. (ಘಚಫ)ಗಳಲ್ಲಿಲ್ಲ. 19. + ಮೆಲ್ಲ (ಘಚಫ).

ಪೋಪ ಬ[1]ಲಕ್ಕೆ[1] ಬಱಿಯಟ್ಟಿದೊಡವರುಂ ಚಿಲಾತ ರಿಸಿಯುಮಂ ಬಲಗೊಂಡು ಬಂದರ್ಚಿಸಿ[2] ಪೊಡೆವಟ್ಟು ಪೊೞಲ್ಗೆವೋದರ್

ಮತ್ತಿತ್ತ ಸುಭದ್ರೆಯುಮಪ್ಪ ವ್ಯಂತರ ದೇವತೆ ವಿಭಂಗ ಜ್ಞಾನದಿಂದಱಿದು ಚಿಲಾತ ರಿಸಿಯುಮಂ ಕಂಡು [3]ಪ[3]ಗೆಯುಮಂ ನೆನೆದು [4]ಪರ್ದಿನ ರೂಪಂ ಕೈಕೊಂಡು ಬಂದು ನೆತ್ತಿಯ ಮೇಗಿರ್ದು ಕಣ್ಗಳಂ ತೋಡಿ [5]ತಿನೆ[5] ಪೆರ್ಗಲಿಂ ಕಟ್ಟಿಱುಂಪೆಗ[6]ಳುಮಾಗಿ ಮೆಯ್ಯೆ[6]ಲ್ಲಮ [7]ನುರ್ಚಿ [ಯುಂ][7] ಸಟ್ಟುಗದಂತೆ ಬಳಸಿಯುಂ ಛಿದ್ರಂ[8]ಮಾಡಿ ಕಾದೆ ಎಣ್ಟು ದಿವಸಮಿರುಳುಂ ಪಗಲುಂ ನಿರಂತರಂ ದೇವೋಪಸರ್ಗಮಂ ಸೈರಿಸಿ ಶುಭಪರಿಣಾಮದಿಂ[9] ಮುಡಿಪೆ ಸರ್ವಾರ್ಥ ಸಿದ್ಧಿಯೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯೊನಹಮಿಂದ್ರ[10]ದೇವನಾ[10]ಗಿ ಪುಟ್ಟಿದಂ

ಮತ್ತಂ ಪೆಱರ್ ಸಂನ್ಯಸನಂ ಗೆ[11]ಯ್ದು[11] ಭವ್ಯರ್ಕಳ್ ಚಿಲಾತ[13]ರಿಸಿಯುಮಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಂ ಪಸಿವು ನೀರೞ್ಕೆ ಮೊದಲಾಗೊಡೆಯ ದುಃಖಂ[14]ಗಳುಮಂ ಸೈರಿಸಿ [15]ಪರಮ ಶುದ್ಧ ಸಹಜ [15]ದರ್ಶನ ಜ್ಞಾನಚಾರಿತ್ರಂಗಳುಮಂ ಸಾಧಿಸಿ [17]ಸ್ವರ್ಗಾಪವರ್ಗಸುಖಂಗಳನೆಯ್ದುಗೆ

---

1. ಳಿಕೆ (ಛ). 2. + ಪೂಜಿಸಿ (ಘಚಛ). 3. ಬ (ಕಗ). 4. + ಮುಳಿಯ (ಘಚಛ). 5. ತಿಂದು (ಘಛ). ದಂತು (ಚ). 6. ಳಾಗಿ ದೇಹಮಂ (ಘಚಛ). 7. ನಿಚ್ಚೆಣಯಿಂ (ಕಖಗ), ನುರ್ಚಿಯುಂ (ಚ). ನುರ್ಚಿಯುಂ (ಘಛ). 8. + ಗಳಂ (ಘಚಛ). 9. ಸಮ್ಯಗ್ ದರ್ಶನ ಜ್ಞಾನಚಾರಿತ್ರಂಗಳಂ ಸಾಧಿಸಿ (ಘಚಛ). 10. (ಘಚಛ)ಗಳಲ್ಲಿಲ್ಲ. 11. ಯ್ದು (ಖ) ಯ್ದನ (ಘಚಛ). 12. + ಪುತ್ರ (ಘಚಛ). 13. + ದೇವನ (ಘಚಛ). 14. ಖ್ಯಂ (ಕಗ), 15. ಸಮ್ಯಗ್ (ಘಚಛ). 16. + ಸಮಾಧಿಮರಣದಿಂ ಮುಡಿಪಿ (ಚ).

## (೧೬) ದಂಡಕನೆಂಬ ರಿಸಿಯ ಕಥೆ

ದಂಡಕನೆಂಬ ರಿಸಿಯ ಕಥೆಯಂ ಪೇೞ್ವೆಂ :

**ಗಾಹೆ** ॥ ದಂಡೋ ಯಮುಣಾ ವಂಕೇಣ ತಿಕ್ಕಕಂಡೇಣಿ ಪೂರಿದಂಗೋ ವಿ ।
ತಂ ವೇದಣಮಗಣಿತ್ತಾ ಪಡಿವಣ್ಣೋ ಉತ್ತಮಂ ಆಟ್ಠಂ ॥

[ದಂಡೋ—ದಂಡಕನೆಂಬ ರಿಸಿ, ಯಮುಣಾವಂಕೇಣ—ಯಮುನಾವಂಕನೆಂಬ ರಸನಿಂದಂ, ತಿಕ್ಖಕಂಡೇಣ—ಕೂರಿ[1]ದವ[1]ಪ್ಪಂಬುಗಳಿಂದಂ, ಪೂರಿದಂಗೋ ವಿ—ತೀವೆಪಟ್ಟ ಮೆಯ್ಯನೊಡೆಯನಾಗಿಯುಂ, ತಂವೇದಣಂ—ಆ ವೇದನೆಯುಂ, ಅಗಣಿತ್ತಾ—[2]ಬಗೆಯದೆ,[2] ಪಡಿವಣ್ಣೋ—ಪೊ[3]ರ್ದಿ[3]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [4]ಅಮಳಕಂಠ[4]ಮೆಂಬುದು ಪೊೞಲದ ನಾ[5]ಳ್ವೊಂ ಅಭಿ[5]ಷ್ಟಸೇನನೆಂಬೊನರಸನಾತನ ಮಹಾದೇವಿ ನಂದಿನಿಯೆಂಬೊಳಾ ಯಿರ್ವರ್ಗಂ ಮಗಂ ದಂಡಕನೆಂಬೊಂ ಪುಟ್ಟಿದೊನಾತಂ ಗರ್ಭದೊಳಿರ್ದಂದು ನಂದಿನಿ ಮಹಾದೇವಿಗಿಂತುಟೊಂದು ಬಯಕೆಯಾದುದೆಲ್ಲಾ [6]ಜನಂ[6]ಗಳುಮಂ ದಂಡಿಸುವಂತಿರೆ[7]ಯ[7]ದಱಿಂದಾತಂ[8]ಗೆ[8] ತಾಯುಂ ತಂದೆಯುಂ ದಂಡಕನೆಂದು ಪೆಸರ ನಿ[9]ಟ್ಟೊರಾತ[9]ನಿಂ ಕಿಱಿಯೊಳ್ ಸಂ[10]ದ[10]ಪತಿಯೆಂಬೊಳ್ ಕೂಸಾಕೆಯನರ್ಧಚ[11]ಕ್ರವರ್ತಿ[11]ಯಪ್ಪ ವಿಷ್ಣುವಿಂಗೆ ಕೊಟ್ಟು ದಂಡಕನುಂ ವಿಷ್ಣುವಿಂಗಾದಮಾನುಂ ಪ್ರಿಯನಪ್ಪ ಸೇನಾ[12]ಪತಿಯಾದನಂ[12]ತನಿಬ[12]ರುಮಿಷ್ಟವಿಷಯ ಕಾಮ ಭೋಗಂಗಳ ನನುಭವಿಸುತ್ತಂ ಪಲಕಾಲಂ ಸಲೆ

ಮತ್ತೊಂದು ದಿವಸಂ ವಿಷ್ಣು [14]ಅ[14]ರಿಷ್ಟನೇಮಿಭಟಾರರಂ ಬಂಧಿಸಲ್ಕೆಂದು ಬಲದೇ[15]ವಂ ಬೆರಸು ಪುತ್ರಕಳತ್ರ [16]ಮಿತ್ರ ಸಪರಿವಾರಂ[16] ಪೋಗಿ ಸಮವಸರಣಮಂ ಪೊಕ್ಕು ಸ್ಫಟಿಕಮಯಮಪ್ಪ ಸೋಪಾನಪಂಕ್ತಿಗಳಿಂ[17]ದೊಪ್ಪುವ ಪ್ರದೇ[17]ಶ ಗಂಧಕುಟಿ[18] ಪ್ರಾಸಾದಮಂ ತ್ರಿಃಪ್ರದಕ್ಷಿಣಂ ಗೆಯ್ದು ಬಂದಭಿಮುಖನಾಗಿರ್ದು ಸ್ತುತಿ ಶತ ಸಹಸ್ರಂಗಳಿಂ [19]ಸ್ತುತಿಯಿಸಿ ಗಂಧ[19] ಪುಷ್ಪ ದೀಪ ಧೂಪಾಕ್ಷತಂ

---

1. ತ (ಕಗ), ತವ (ಖ). 2. ಉಪಮೆಗಳಿದವಾಗಿಯುಂ (ಕಗ), ಉಪಮೆಗಳಿವನಾಗಿಯುಂ (ಖ). 3. ರ್ದ್ದ (ಕಖಗ). 4. ಮಾಳವವಿಷಯ (ಘಚಛ). 5. ಳ್ವೊನರಿ (ಘಚಛ). 6. ಜೀವಂ (ಚಛ). 7. ಬಯಕೆಯಾದು (ಘಚಛ). 8. ಪುಟ್ಟಿದೊಡೆ (ಘಚಛ), ಪುಟ್ಟಿದೊಡೆ (ಘ). 9. ಟ್ಟರಾ (ಕಖಗ), ಟ್ಟೊರಾ (ಚಛ). 10. ದಾ (ಘಚಛ). 11. ಕ್ರ (ಘಚಛ). 12. + ಧಿ (ಘಚ). 13. ತಿರ್ವ (ಘಚಛ). 14. ನ (ಘಚಛ). 15. ವನುಂ ದಂಡಕನುಂ (ಘಚಛ). 16. ಪರಿವಾರ ಸಹಿತಂ (ಖಘಚಛ). 17. ದೇ (ಘಚಛ). 18. + ಯ (ಘಚಛ). 19. ಪೊಗಳ್ದು ಬಂದಿಸಿ (ಘಛ), ಪೊಗಳ್ದು ಬಂದಿಸಿ ಗಂಧ (ಚ).

ಗಳೆಂದರ್ಚಿಸಿ ಗಣಧರ ದೇವರ್ ಮೊದಲಾಗೊಡೆಯ ಋಷಿ ಸಮುದಾಯಮುಮಂ ಗುರುಪರಿ[1]ಪಾ[1]ಟಿಯಿಂದಂ ವಂದಿಸಿ [1]ತಮ್ಮ ಪ್ರೋಣಪರಿ[2]ಯೊಳ್ ಧರ್ಮಮುಮಂ[3] ಕೇಳ್ದು ತದನಂತರಂ ವಿಷ್ಣುವಿಂತೆಂದು ಬೆಸಗೊಂಡಂ ಭಟಾರಾ [4]ಈ ಅ[4]ತಿ ರೌದ್ರನಪ್ಪ ದಂಡಕಂ ನರಕಂಬುಗುವಂತಿರೆ ಪಿರಿದುಂ ಪಾಪಮಂ ನೆರಪಿದನೀತನ ಪಾಪಕರ್ಮದುಪಶಮಮೆನಿತು ಕಾಲ[5]ದಿಂದ[5]ಕ್ಕುಂ ಮತ್ತಮೀತನ ಮುನ್ನಿನ ಭವಮೇನೆಂದು ಬೆಸಗೊಂಡೊಡೆ ಸಕಲ ವಿಮಲ ಕೇವಲ ಜ್ಞಾನ[6] ವಿರಾಜಿತನಪ್ಪ ಅರಿಷ್ಟನೇಮಿ ಭಟಾರರಿಂತೆಂದು ಪೇೞ್ದರ್

ಈ ಜಂಬೂದ್ವೀಪದ ಪೂರ್ವವಿದೇಹದೊಳ್ ವೀತಶೋಕಮೆಂಬುದು ಪೊೞಲ್ ಉಂಟು ಅದನಾಳ್ವೊನ್ ಅಶೋಕನೆಂಬೊನರಸನಾತನ ಮಹಾಸಾಮಂತಂ ಸು[7]ಧಾಮಕ[7]ನೆಂಬೊಂ ತೀವ್ರಲೋಭದೊ[8]ನ[8]ತಿ ರೌದ್ರಮಪ್ಪಾರಂಭ ಕರ್ಮದೊಳ್ ಕೂಡಿ[9]ದೊಂ *ತನ್ನಾ[9]ರಂಭದ ಕೆಯ್ಗಳನೊಕ್ಕು [10]ಪೆಟ್ಟು[10]ಗಳ ಬಾಯುಮಂ ಕಟ್ಟಿಯೊಕ್ಕಿಸು[11]ಗುಂ ಮತ್ತ[11]ಡುವ ಬಡಿಸುವ ಬೆಸಕೆಯ್ವ ಪೆಂಡಿರ[12]ಮೊಲೆ[12]ಗಳಂ [13]ಸೀರೆಯುಂ ಕಟ್ಟಿಸಿ[18] ಕೂಸುಗಳಂ ಮೊಲೆಯುಣಲೀಯದೆ ಬೆಸಕೆಯ್ಸುಗುಂ ಮತ್ತಂ ಕೊಲೆಯುಂ [14]ಪಿರಿದಾ[14]ರಂಭಮುಮಂ ಪೆರ್ಚ[15]ರದು[15]ಮೆಂಬಿವು ಕಾರಣಮಾಗಿ ನರಕಾಯುಷ್ಯಂ ಕ[16]ಟ್ಟಿ ಕಾಲಂ[16] ಸಲೆ ಆತಂಗೆ ಶಿರೋರೋಗಮುಂ ಮುಖರೋಗಮುಮಾಗಿ ವೇದನಾಭಿಭೂತನಾಗಿರ್ಪನ್ನೆಗಂ [17]ವೈದ್ಯ[17]ರಂ ಬೆಸಗೊಂಡೊಡದರ್ಕೆ ಪ್ರತೀಕಾರಮೊಂದು ದಿವಸಂ ತನಗೆ ಮದ್ದುಮನೆ[18]ರೆಯು[18]ಟ್ಟು ಕೂೞನುಣಲೆಂದಿರ್ಪನ್ನೆಗಂ ಸಮಾಧಿಗುಪ್ತರೆಂಬ [19]ಭಟಾರ[19]ರ್ ಚರಿಗೆವೊಕ್ಕ[20]ರ[20]ವರನತಿಭಕ್ತಿಯಿಂದಂ ನಿಱಿಸಿ ತನಗುಳ್ಳ ವ್ಯಾಧಿಯುಮ[21]ಗ್ಗ[21]ಳಿಂಬುದನಱಿದು ತನಗೆಂದು ಮಾಡಿದ ಮರ್ದಿನ ಕೂೞನವರ್ಗೆ ಬಡ್ಡಿಸಿದೊಡವ[22]ರ್ ಚರಿಗೆ ಮಾಡಿ[22] ಪರಸಿ ಪೋದರ್ ಪನ್ನೆರಡು ವರುಷದ ಶಿರೋರೋಗಮುಂ ಮುಖರೋಗಮುಮಾ ರಿಸಿಯರ್ಗೆ ಕೆಟ್ಟಿತ್ತಾ ಸುಧಾ[23]ಮಕ[23]ನುಂ ದಾನದ ಫಲದಿಂದಂ ಕಿಱಿದು ಪುಣ್ಯಮುಂ ನೆರಪಿಕೊಂಡಂ ಮತ್ತಂ ಬ[24]ದ್ಧಾಯುಷ್ಯ[24]ನಪ್ಪುದಱಿಂ ಮೂಱನೆಯ ನರಕದೊ[25]ಳೇ[25]ೞುಂ ಸಾಗರೋಪಮಾಯುಷ್ಯಮನೊಡೆ[26]ಯೊಂ ನಾರಕನಾಗಿ ಪುಟ್ಟಿ[26]

**ಗಾಹೆ** ॥ ಅಚ್ಛಿಣಿಮಿಲಣ ಮೇತ್ತಂ ಣತ್ಥಿ ಸುಹಂ ದುಖ್ಖಮೇವ ಅಣುಬದ್ಧಂ ।
ಣರಯೇ ಣೇರಯಿಯಾಣಂ ಅಹಣ್ಣಿಸಂ ಪಚ್ಚಮಾಣಾಣಂ ॥

---

1. ಪ (ಫ). 2. ತಮ್ಮ ಪೇಣಡೆ (ಫಚ), ತಂತಮ್ಮ ಪೇಣಡೆ (ಛ). 3. + ನೀಡುಂ ಬೇಗಂ (ಫಚಫ). 4. ವ್ರ (ಚ). 5. ಕ್ಕ (ಫಚಫ). 6. + ತ್ರಿತೀಯನೇತ್ರ (ಫಚಫ). 7. ದಾಮಕ (ಛ). ದಾಕರ (ಫಚಫ). 8. ಳ (ಫಚಫ). 9. ದಾತನಾ (ಫಚಫ). *ಪುಟ ೧೬೩–ಪುಟ ೧೬೫ * (ಚ)ದಲ್ಲಿ ನಷ್ಟವಾಗಿದೆ; ೧೬೪ನೆಯ ಓಲೆ ಹೋಗಿದೆ. 10. ದುಪ್ಪ (ಕಖಗ). 11. ಗುಮು (ಛ). 12. ಮಾಕೆ (ಕಗ). 13. (ಫಫ)ಗಳಲ್ಲಿಲ್ಲ. ಪೆಂಡೆಳ್ವು (ಫಫ). 14. ಹಿಂಸಾ (ಛ). 15. ರುಗಳು (ಫಫ). 16. ನಕಾಲಂ (ಛ). ಟ್ಟಿಯು ಕಾಲಂ (ಫಫ). 17. ಬೆಜ್ಜ (ಫಫ). 18. ಸುಮು (ಕಗ). 19. ರುಷಿಯು (ಫಫ). 20. ರ (ಫಫ). 21. ಗ್ಗಮುಂ (ಫ). 22. ರುಮುಂಡು (ಫಫ). 23. ಕರ (ಫಫ). 24. ದಾಯುಷ್ಯ (ಛ). 25. ಳ್ ಪುಟ್ಟಿಯೇ (ಫಫ). 26. ಯೋನಾಗಿ ಪುಟ್ಟಿದಂ (ಫಫ).

ಇಂತು ನರಕ[1]ಲೋಕದೊಳ್ ಕಣ್ಣೆವೆಯಿಕ್ಕುವನಿತಂ ಪೊೞ್ತುಪ್ಪೊಡಂ ಸುಖಮಿಲ್ಲದೆ ಪಲಕಾಲಂ ದುಃಖಮನನುಭವಿಸಿ ಬಂದಿಲ್ಲಿ ದಂಡಕನಾದಂ ಮುನ್ನಿನ ಭವದೊಳ್ ಪ್ರಾಣಿಗಳಂ ದಂಡಿಸಿದ[2] ತನ್ನ ಪೂರ್ವದಭ್ಯಾಸಮನೆ ನಂದಿನಿ ಮಹಾದೇವಿಯ ಗರ್ಭದೊಳಿರ್ದು ತೋಱಿದನಪ್ಪುದಱಿಂ ದಂಡಕನೆಂಬ ಪೆಸರಾಯ್ತಿಂತಪ್ಪ [3]ಸ್ವಾ[3]ಸು ಭೂತಮಪ್ಪ ನರಕ ಲೋಕದ ಮಹಾದುಃಖಮಂ ಸರ್ವಜ್ಞರ್ ಪೇೞೆ ನಂಬಿ ನರಕದ ಮಹಾದುಃಖಕ್ಕಂಜಿ ದಂಡಕಂ ತಪಂಬಟ್ಟೋದುಗಳೆಲ್ಲಮಂ ಕಲ್ತು ರಿಸಿಯರ್ಕಳೊಡನೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚರಿಗೆವೊಕ್ಕುಡಾರುಂ ನಿ[4]ಱಿಸುವೊರಿಲ್ಲ[4] [5]ಮೂಱಿತ್ತು ನಿಱಿಸಿದೊಡಂ[5] ಛರ್ದಿಯಕ್ಕುಂ ರಿಸಿಯರ್ಕಳೊಡನೆ ಚರಿಗೆವೊಕ್ಕೊಡನಿಬರ್ಗಮಲಾಭಮಕ್ಕುಂ ಮತ್ತಂ ವಾತ ಪಿತ್ತ ಶ್ಲೇಷ್ಮ ಕಾಸ ಶ್ವಾಸ ಜ್ವರಾರುಚಿ ಛರ್ದಿ ಅತಿಸಾರಾಕ್ಷಿ ಕುಕ್ಷಿವೇದನಾಸ್ಫೋಟಕ ಪಿಟಿಕ ಶೂಲ ಭಗಂದರ ಕುಷ್ಠ ಕ್ಷಯ ಗಂಡ ಶಿರೋವೇದನಾದಿ ವ್ಯಾಧಿಗ[6]ಳಾಗಿ[6] ರೂಪಱಿಯಲಾಗದಂತಿರೆ ವ್ಯಾಧಿಗಳಿಂದಮೊಟ್ಟಯಿಸೆ ಪಟ್ಟನಾಗಿ ಮಗುೞ್ದು ವಿಹಾರಿಸುತ್ತಂ ರಿಸಿಯರ್ಕಳೊಡನೆ ದ್ವಾರಾವತಿಗೆ ಬಂದಿರ್ದೋರ್

ಅನ್ನೆಗಮೊಂದು ದಿವಸಂ ವಿಷ್ಣು ಬಂದು ರಿಸಿಯರ್ಕಳಂ ವಂದಿಸಿಯವರೊಳಗೆ ದಂಡಕ ರಿಸಿ[7]ಯಾರೆಂದೊಡೆ[7] ಕೆಲದ ರಿಸಿಯರ್ ತೋಱಿದೊಡ[8]ವರಂ ವಂದಿಸಿ ನೋಡಿ ವ್ಯಾಧಿಯ ಪ್ರಬಲತ್ವಮಂ ಕಂಡು ವೈಯಾವೃತ್ಯಂ ಗೆಯ್ವುದ[9]ಕಾ[9]ದ ಮಾನುಮ[10][ಟ್ರಿ][10]ಯೊ[11]ಡೆಯನಾಗಿ ಪ್ರೊಡೆವಟ್ಟಿಂತೆಂದಂ ಭಟಾರಾ ನಿಮ್ಮನೊಂದಂ ಬೇಡಿವ[12]ಪ್ಪೆಂ ದಂಡಕ ರಿಸಿಯಿರಾ[12] ವರ್ಷಾ[13]ಕಾ[13]ಲಮನೆನ್ನ ದೇಹಾರದೊಳಿರ್ದಂತಃಪುರದ ಮನೆಗಳೊಳ್ ಚರ್ಯಾಮಾರ್ಗಂಬುಗುವುದನೆನಗೆ ದಯೆಗೆಯ್ಯಲ್ವೇೞ್ಕು ಮೆಂದೊಡವರುಮಂತೆಗೆಯ್ವೆನೆಂದು ವಿಷ್ಣು[14]ವ[14] ದೇಹಾರದೊಳ್ ಜೋಗಂಗೊಂಡಿರ್ದೊಡೆ ವಿಷ್ಣು ತನ್ನ ಪ್ರಧಾನನಪ್ಪ ಜಯನೆಂಬ ವೈದ್ಯನಂ ಕರೆದಿಂತೆಂದಂ ನಮ್ಮ ದಂಡಕ ರಿಸಿಯ ಕುತ್ತಮನೆಂತು ಬಲ್ಲೆಯಂತೆ ತೀರ್ಚೆಂದು ಪೇೞ್ದೊಡಾತನುಮಂತೆಗೆಯ್ವೆನೆಂದು ದಿವ್ಯೌಷಧಿಗಳಿಂದಂ ಮಾಡಿದುಂಡೆಗಳಂ [15]ಬಿಟ್ಟಿನೊಳ್[15] ಸಾಸಿರ್ವರರಸಿಯರ್ಕಳ ಮನೆಗಳೊಳ್ ಪ್ರಯೋಗಿಸಿಯಾ ರಸಿಯರಂ ಮರ್ದನೂಡಿದಂ ಮತ್ತಂ ಪೊೞಲೊಳಗೆಲ್ಲಂ ಉಂಡೆಯ ಪರ್ವಮಂ ಮಾಡಿಸಿದನಿಂತು ವರ್ಷಾಕಾಲದ ನಾಲ್ಕು ತಿಂಗಳೊಳಂ ಮ[16]ರ್ದನೂ[16]ಡಿ ಕುತ್ತಮನಿಂಬುಮಾಡಿದೊಡೆ ವೈಯಾವೃತ್ಯಂ ಗೆಯ್ವುದಱಿಂ ಳಾದಮಾನುಂ ಉದ್ಯೋಗಪರನಪ್ಪುದಱಿಂ

1. (ಛ)ವಲ್ಲಿಲ್ಲ. 2. ದಪ್ಪುದಱಿಂ (ಘಛ). 3. ಸ್ವಭಾವಾ (ಕಗ). 4. ಱಿಸುವರಿಲ್ಲ (ಕಖಗ), ಱಿ (ಲಿ) ಸುವೊರಿಲ್ಲದೊಡೆ (ಘಛ). 5. ನಿಱಿಸಿಯಾರನುಂ ಚರಿಗೆ ಮಾಡಿಸಿದ (ದೊ) ರಪ್ಪೊಡಂ (ಕಖಗ), ಮೂಱಿತ್ತುನಿಱಿಸಿದೊಡಂ (ಘ). 6. ಳ ರೂಪಿಂ (ಘಛ). 7. ಯ ರಾರೆಂದು ಬೆಸಗೊಂಡೊಡಿವರ್ ದಂಡಕರುಷಿಯರೆಂದು (ಘಛ). 8. ರಸಂ (ಘಛ). 9. ಱಿಳಾ (ಘಛ). 10. ಶ್ರೀ (ಕಖಗಘಛ). 11. + ಡಂ ಬೊ (ಖ), ಪೇ (ಘಛ). 13. ಗಾ (ಘಛ). 14. ಬಿಪ (ಘಛ). 15. ಪದಿನಾಱು (ಘಛ). 16. ರ್ದಂ ಮಾ (ಘಛ).

[1]ಸೌಂಬ[1] ಕಲ್ಪದೊಳ್ ಎರಡು[2] ಸಾಗರೋಪಮಾಯುಷ್ಯಮನೊಡೆಯೊಂ ಸಾಮಾನಿಕ ದೇವನಾಗಿ ಪುಟ್ಟಿ[3]ದೊಂ ತನ್ನ[4]ವಧಿ[4]ಜ್ಞಾನದಿಂದಮಱಿದು ಮಹಾವಿಭೂತಿ ಯಿಂದಂ ಬಂದು ಧ್ವಜ ಮಕುಟ ಸಿತಾತಪ[5]ತ್ರಾದಿಗಳೊಳ್[5] ಮಣಿಮಯಮಪ್ಪ ಮರ್ಕಟ ಚಿಹ್ನದೊಳ್ ಮುನಿವರನಂ ಪೂಜಿಸಿ *ಪೊಡೆವಟ್ಟಿಂತೆಂದನೀ ದೇವತ್ವಮುಂ ವಿಭೂತಿಯುಮಂ ಪಶುಜಾತಿಯಪ್ಪೆನಗೆ ನೀಮಿತ್ತಿರ್ ಭಟಾರಾ ಎಂದು ತನ್ನ ಪೂರ್ವಭವಸಂಬಂಧಮೆಲ್ಲಮಂ ಪೇೞ್ದು ತನ್ನೊಡಲಮಂ* ಪೂಜಿಸಿ ಪೋದನಾಯೆಡೆ [6]ಲೋಕದೊಳ್[6]ಮಹೇಶ್ವರಮೆಂಬ ತೀರ್ಥಮಾಯ್ತು

ಮತ್ತಿತ್ತ ದಂಡಕ ರಿಸಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕ್ರಮದಿಂದುತ್ತರ ಮಥುರೆಯ ನೆಯ್ದಿಯಲ್ಲಿ ಸೂರ್ಯಪ್ರತಿಮೆ ನಿಂದರನ್ನೆಗಂ ಆ ಪೊೞಲನಾಳ್ವೊಂ ಯಮುನಾವಂಕ ನೆಂಬೊನರಸನಾತಂ [7]ದಂಡಕನಿಂದಂ ಪಲವು [8]ಸೂೞ್ ದಂಡಣೆಗಳನೆಯ್ದಿದನಪ್ಪು ದಱಿಂದಂ ದಂಡ[9]ಕಂ ಬಂದ[9]ನೆಂಬ ವಾರ್ತೆಯಂ ಕೇಳಲೊಡಂ ಜಾತ್ಯಶ್ವಮನೇಱಿ [10][ಓ][10]ಡುವನ ಬೞಿಯಂ ಮಂತ್ರಿ ತಗುಳ್ದೋಡಲೀಯದೆ ಮಾಣಿಸಿಯಿಂತೆಂದಂ ದಂಡಕಂ ತಪಂಬಟ್ಟು ಬಂದನೆಂದಱಿಯೆ ಪೇೞ್ವಾಗಳ್ ಮಗುೞ್ದು ಬಂದತಿಕ್ರೋಧ ದಿಂದಂ ಕಾಸಿದ ಮೊನೆ[11]ಯಂಬುಳ್ಳವನ[ಪು]ಱಿಂ[11] ಮೆಯ್ಯ[12]ನ[12]ನೇಕ ಶರಸಂಘಾ ತಂಗಳಿಂ[13]ದುದೆಚ್ಚೊ[13]ಡವರುಮಾ ವೇದನೆಯುಮಂ ಸೈರಿಸಿ[14] ಸಮತ್ವ[14] ಭಾವನೆಯಂ [15]ಭಾವಿ[15]ಸಿ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವನಂ ನಿವೃತ್ತಿಗೆಯ್ದು ಶುಕ್ಲಧ್ಯಾನಂಗಳಂ ಧ್ಯಾನಿಸಿ [16]ಕರ್ಮಕ್ಷಯಂ ಗೆಯ್ದು[16] ಮೋಕ್ಷಕ್ಕೆ ಪೋದರ್

ಅನ್ನೆಗಂ ಇತ್ತ ಚತು[17]ರ್ವಿಧ ದೇವನಿಕಾಯಂ[17] ತಂತಮ್ಮ ಜ್ಞಾನಂಗ ಳಿಂದಱಿದು ಚಿತ್ರಪ[18]ಟಮಂ ಕೆ[18]ದಱಿದಂತೆಯಾಕಾಶಮೆಲ್ಲಮಂ ವ್ಯಾಪಿಸಿ ನಾನಾ ವಿಧ ವಾಹನಾ[19]ರೂಢರ್ಕಳ್ ಜ್ವಲನ್ಮಣಿ[20]ಮಯ[20] ಮಕು[21]ಟಾಗ್ರ[21]ವಿನ್ಯಸ್ತ [22]ಹಸ್ತ[22]ರ್ಕಳಾಗಿ ಇಂದ್ರಾದಿ ದೇವರ್ಕಳುಂ ಜಯಜಯ[23]ಶಬ್ದಂ[23]ಗಳಿಂದಂ ಮುನಿ [24]ವರೇಣ್ಯನ[24] ಗುಣಂಗಳಂ [25]ನೆಗೞ್ತೆಯುಂ ಪೊಗೞುತ್ತಂ ಬಪ್ಪೊರಂ ಕಂಡು ಭಯಂ ಕಾರಣಮಾಗಿಯುಂ ಕರ್ಮಂಗಳುಪಶಮಂ ಕಾರಣಮಾಗಿಯುಂ ಯಮುನಾ

---

1. (ಖಘಚಛ)ಗಳಲ್ಲಿಲ್ಲ. 2. ಏಳು (ಘಚಛ). 3. (ಘಚಛ)ಗಳಲ್ಲಿಲ್ಲ. 4. ದಿವ್ಯ (ಕಗ). 5. ತ್ರಂಗಳುಂ (ಘಚಛ). *–*ಇದು (ಕಗ)ಗಳಲ್ಲಿಲ್ಲ. 6. ಕೆ ದೇವರ್ಕಳ್ ಬಂದುದಱಿಂದ (ಘಚಛ). 7. +ಮುನ್ನನ್ನೇಕವಾರಂ (ಕಖಗ); 'ವಾರಂ' ಎಂದಿರಬಹುದೆ? 8. (ಕಖಗ)ಗಳಲ್ಲಿಲ್ಲ. 9. ಕ (ಘಚಛ). 10. ಯೋ (ಕಖಗ), ಪೋ (ಘಚಛ). 11. ಯಂಬುಳ್ಳವನವಱಿಂ (ಕ), ಯಂಬುಳ್ಳವಱಿಂದಂ (ಖ), ಯಂಬುಳ್ಳವನರಿಂ (ಗ), ಯುಳ್ಳಂಬುಗಳಿಂದಂ (ಘಚಛ). 12. ನಂತ (ಕಖಗ). 13. ದೆ ಮೆಟ್ಟಿದೊ (ಕಗ). 14. +ಸಮ್ಯಗ್ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ (ಘಚಛ). 15. ಸಾಧಿ (ಛ). 16. ಯಷ್ಟವಿಧಕರ್ಮಂಗಳಂ ಕೆಡಿಸಿ (ಘಚಛ). 17. ರ್ನಿಕಾಯ ದೇವರ್ಕಳುಂ (ಛ). 18. ಟಂಗೆ (ಘಚಛ). 19. +ದಿ (ಕಖ), +ಧಿ (ಗ). 20. (ಘಚಛ)ಗಳಲ್ಲಿಲ್ಲ. 21. ಟಗ್ರಸ್ತ (ಕಗ). 22. (ಘಚ)ಗಳಲ್ಲಿಲ್ಲ. 23. ಶಂಖಂ (ಕ), ಶಂಖಧ್ವನಿ (ಗ), (ಚ)ದಲ್ಲಿ ತ್ರುಟಿತ. 24. ಯ (ಖಘಛ), (ಚ)ದಲ್ಲಿ ತ್ರುಟಿತ. 25. (ಖಘಚ)ಗಳಲ್ಲಿಲ್ಲ, (ಚ)ದಲ್ಲಿ ತ್ರುಟಿತ.

ನಂಕಂ ತಪಂಬಟ್ಟಂ ತಪಂಬಟ್ಟೊಡಮಾ ರಿಸಿಯುಂ ಕೊಂದ ಪಾಪದ ಫಲದಿಂದನೇಕ ಮಹಾವ್ಯಾಧಿಗಳುಮಾದವು ಮತ್ತಮಾ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತಮಂ ನೆಗಟ್ಟಿ ಪಲಕಾಲಮುಗ್ರೋಗ್ರ[1]ಘೋರವೀರ[1] ತಪಶ್ಚರಣಂ ಗೆಯ್ಯುತ್ತಂ[2] *ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೋರ್ ಸ[3]ಜ್ಞಾತ[3]ಗಿರಿಯುನೆಯ್ದಿಯಲ್ಲಿಯೆ ರಾತ್ರಿ ಪ್ರತಿಮೆ ನಿಂ[4]ದೊ[4]ರನ್ನೆಗಂ ಕಾ[5]ಟ್ಟಿ[5]ಚ್ಚು [6]ಮೂವಳಸಂ[6] ಬಳಸಿಯುಂ ತಗುಳ್ದು ತಮ್ಮಂ ಸುಡೆ ಚತುರ್ವಿಧಮಪ್ಪಾಹಾರ[7]ಕ್ಕಂ [8]ಜಾವಜ್ಜೀವಂ[8] ನಿವೃತ್ತಿಗೆಯ್ದು [9]ಶುಭಮಪ್ಪ[9] ಶುಕ್ಲಧ್ಯಾನಂಗಳಂ ಜಾನಿಸಿ [10]ಘಾತಿ[10] ಕರ್ಮಂಗಳಂ ಕಿಡಿಸಿಯಂತರ್ಗತ ಕೇವಲಿಯಾಗಿಯೆಂಟು ಕರ್ಮಂಗಳಂ[11] ಕಿಡಿಸಿ ತಪೋಗ್ನಿಯಿಂ ಸುಟ್ಟು ಮೋಕ್ಷಕ್ಕೆ ಪೋದರ್

ಮತ್ತೆ ಪೆಱರುಂ ಸಂನ್ಯಸನಂ ಗೆಯ್ದು[12]ದರ್ಶ ಕ್ಷಪಣಕ[12]ರುಂ ದಂಡಕ ರಿಸಿಯುರಂ ಕಾಸಿದ ಪೊನೆಯಂ†ಬುಗಳಿಂದೆ[13]ಚ್ಚು[13] [14]ಮಾಡಿ[14]ದುಪಸರ್ಗಮುಮಂ ಯಮುನಾವಂಕ ರಿಸಿಯರ್ ಕಿಚ್ಚಿನಿಂ ಬೆಂದುಪಸರ್ಗಮುಮಂ ಮನದೊಳ್ ಬಗೆದು ಪಸಿವುಂ ನೀರಟ್ಟಿ ಮೊದಲಾಗೊಡೆಯಿರ್ಪತ್ತೆರಡು†ಪರೀಷಹಂಗಳುಮಂ ವ್ಯಾಧಿಗಳೊಳ[15]ಪ್ಪ ವೇದನೆಗಳುಮಂ ಸೈರಿಸಿ [6]ಪರಮ ಶುದ್ಧಸಹಜ[16] ದರ್ಶನ ಚಾರಿತ್ರಂಗಳಂ ಸಾಧಿಸಿ* ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

1. (ಘಛ)ಗಳಲ್ಲಿಲ್ಲ. (ಜ)ದಲ್ಲಿ ತ್ರುಟಿತ. 2. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಜಛಘ). *–* ಈ ಭಾಗ (ಘ)ದಲ್ಲಿಲ್ಲ. 3. ಜ್ಞ (ಘ), (ಜ)ದಲ್ಲಿ ತ್ರುಟಿತ. 4. ದ (ಕಖಗ) (ಜ)ದಲ್ಲಿ ತ್ರುಟಿತ. 5. ಟಿ (ಖ). 6. (ಖಘ)ಗಳಲ್ಲಿಲ್ಲ. (ಜ)ದಲ್ಲಿ ತ್ರುಟಿತ. 7. + ಶರೀರ (ಘಜ). 8. (ಘ)ದಲ್ಲಿಲ್ಲ, (ಜ)ದಲ್ಲಿ ತ್ರುಟಿತ. 9. (ಖಘ)ಗಳಲ್ಲಿಲ್ಲ. (ಜ)ದಲ್ಲಿ ತ್ರುಟಿತ. 11. + ನಿರವಶೇಷಂ (ಘ). 12. ದರ್ಶರಾಧಕರಪ್ಪವ (ಘ). ದ ಆರಾಧಕರಪ್ಪವ (ಜ). 13. ಚರ್ಚ (ಕಗ). †–† (ಜ)ದಲ್ಲಿ ತ್ರುಟಿತ, 14. ಕೊಂ (ಘ). 15. + ಪಟ್ಟ (ಘ). 16. ಸಮ್ಯಗ್ (ಘಜ).

## (೧೭) ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ

ಮಹೇಂದ್ರದ[1]ತ್ತಾಚಾರ್ಯರ್[1] ಮೊದಲಾ[2]ಗೊಡೆಯ ಅ[2]ಯ್ನೂ[3]ರ್ವರ್[3] ರಿಸಿಯರ್ಕಳ ಕಥೆಯಂ ಪೇೞ್ವೆಂ :

ಗಾಹೆ ॥ ಣಗರೇ ಮಹೇಂದ್ರದತ್ತಾದೀಣಂ ಪಂಚಸದಾ ಕುಂಭಕಾರಘಡೇ ।
ಆರಾಧಣಂ ಪವಣ್ಣಾ ಪೀಳಿಜ್ಜಂತಾವಿ ಜಂತೇಹಿಂ ॥

[ಣಗರೇ—ಪೊೞಲೊಳ್, ಮಹೇಂದ್ರದತ್ತಾದೀಣಂ—ಮಹೇಂದ್ರ[4]ದತ್ತರೆಂಬಾಚಾರ್ಯರ್[4] ಮೊದಲಾಗೊಡೆಯ ರಿಸಿಯರ್ಕಳ್, ಪಂಚಸದಾ—ಅಯ್ನೂರ್ವರ್, ಕುಂಭಕಾರಘಡೇ—ಕುಂಭಕಾರಘಟಮೆಂ[5]ಬುದಱೊ[5]ಳ್, ಆರಾಧಣಂ—[6]ಸಹಜ[6] ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ, ಪವಣ್ಣಾ—ಪೊ[7]ರ್ದಿ[7]ದೊರ್, ಪೀಳಿಜ್ಜಂತಾವಿ—ಪೀಡಿಸೆಪಟ್ಟರಾಗಿಯುಂ. ಜಂತೇಹಿಂ—ಗಾಣಂಗಳಿಂದಂ]

ಅದೆಂತೆಂದೊಡೆ :

ಈ ಜಂಬೂ ದ್ವೀಪದ ಭರತಕ್ಷೇತ್ರದೊಳ್ [8]ವಿದೇಹಮೆಂಬುದು ನಾಡಲ್ಲಿ[8] ಸಾವಸ್ತಿಯೆಂಬುದು ಪೊೞಲುಂಟದನಾಳ್ವೊಂ ಜಿತಶತ್ರುವೆಂ[9]ಬೊನ[9]ರಸನಾತನ [10]ಮಹಾದೇವಿ ಧಾರಿಣಿ[10]ಯೆಂಬೊಳಾಯಿರ್ವರ್ಗ್ಗಂ ಮಗಂ ಸ್ಕಂದಕುಮಾರನೆಂಬೊನಾತನಿಂ ಕಿಱಿಯೊಳ್ ಪುಂಡ್ರಯಶೆಯೆಂಬೊಳಾಕೆಯಂ ದಕ್ಷಿಣಾಪಥದೊಳ್ ಕುಂಭಕಾರಘಟಮೆಂ[11]ಬ[11] ಪೊೞಲದನಾಳ್ವೊಂ ದಂಡಕನೆಂಬರ[12]ಸಂ[12]ಗೆ ಕೊಟ್ಟು ಅಂತವರ್ಗ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ[13] ಕಾಲಂ ಸಲೆ ಮತ್ತಿತ್ತ ಮುನಿಸುವ್ರತ ತೀರ್ಥಕರ ಪರಮ ದೇವರ ಪಕ್ಕದೆ ಮಹೇಂದ್ರದತ್ತನುಂ ಜಿತಶತ್ರುವ ಮಗನಪ್ಪ ಸ್ಕಂದಕುಮಾರನುಂ ಮೊದಲಾಗೊಡೆಯ ಅಯ್ನೂರ್ವರ್ ರಾಜಪುತ್ರರ್ಕಳ್ ತಪಂಬಟ್ಟೋದುಗಳೆಲ್ಲಮಂ ಕಲ್ತು ಅಭಿನಂದನರೆಂಬ ಗಣಧರರೊಡನೆ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೋರ್ ಕಳಿಂಗ[14]ದೇಶ[14]ದೊಳ್ ದಂತಪುರಮೆಂಬ ಪೊೞ[15]ಲ[15]ನೆಯ್ದಿ ಅಲ್ಲಿ ಕಲವು ದಿವಸಮಿರ್ಪನ್ನೆಗಂ ಆ ಪೊೞಲನಾಳ್ವೊಂ ಜನಾರ್ದನ ಮಹಾ

---

1. ತ್ತಂ (ಫ). (ಚ)ದಲ್ಲಿ ತ್ರುಟಿತ, (ಛ)ದಲ್ಲಿ ಈ ಪೂರ್ತಿ ವಾಕ್ಯವೇ ಇಲ್ಲ. 2. ದ (ಕಗ). 3. ಱು (ಕ). 4. ತ್ತಂ (ಫಚಛ). 5. ಬಪ್ಪೊೞಲೊ (ಫಛ), (ಚ)ದಲ್ಲಿ ತ್ರುಟಿತ. 6. +ಸಮ್ಯಗ್ (ಫಛ), (ಚ)ದಲ್ಲಿ ತ್ರುಟಿತ. 7. ರ್ದ್ದ (ಖ). 8. ಪೂರ್ವದೇಶದೊಳ್ (ಕಖಗ). 9. ಬ (ಕಖಗ). 10. ಮಹಾದೇವಿ ಮಹಾ (ಛ). ರತಿ ಮಹಾದೇವಿ. 11. ಬುದು (ಫಚಛ). 12. ಸನಾತಂ (ಫಚಛ). 13. +ಪಲ (ಫಚಛ). 14. ವಿಷಯ (ಫಚಛ). 15. (ಫಚಛ).

ರಾಜ[1]ನೆಂಬೊರಸ[1]ನಾತನ ಪುರೋಹಿತಂ [2]ವ್ಯಾಳ[2]ನೆಂಬೊನಾತಂ ಸ್ಕಂದಕುಮಾರ ಋಷಿಯರೊಡನೆ ಅರಸನ ಮುಂದೆ ಪಂಡಿತರ್ಕಳ ನಡುವೆ[3]ವಾ[3]ದುಗೆಯ್ದು ಸೋಲ್ತೊಡರಸನಾತನನಟ್ಟಿ ಕಳೆದೊಡಾತನುಂ ಪೋಗಿ ದಂಡಕನೆಂಬರಸಂಗಾಳಾಗಿ[4]ಯುಲ್ಲಿ[4] ಮಂತ್ರಿಪದಮಂ ಪೆತ್ತಿರ್ಪನ್ನೆಗಂ

ಮತ್ತಿತ್ತ ಋಷಿಯರ್ಕಳುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳೊಳ್ ವಿಹಾರಿಸುತ್ತಂ ಬರ್ಪೋರ್ ಕುಂಭ[5]ಕಾರ[5]ಘಟಮೆಂಬ ಪೊೞಲ್ಗೆವಂದೊಡಾ ಪೊೞಲನಾಳ್ವ ದಂಡಕ[6]ನೃಪತಿ[7] ಬಿ[8]ಜ್ಜುವರ್ಗೆ[8] ಭಕ್ತನಪ್ಪಾತಂ ರಿಸಿಯರ್ಕಳ ಬರವಂ ಕೇಳ್ದು ಬಂದು ಬಂದಿಸಿಯಭಿನಂದಿಸ ಭಟಾರರ ಪಕ್ಕದೆ[9] ವಿಚಾರಿಸಿ ಧರ್ಮಮಂ ಕೇಳ್ದು ಘಾಜ್ಜಿ ನಂಬಿ ಶ್ರಾವಕಬ್ರತಂಗಳಂ ಕೈಕೊಂಡು ಶ್ರಾವಕನಾಗಿ ಅಯ್ನೂರ್ವರ್ ರಿಸಿಯರ್ಕಳುಮಂ ಪ್ರತಿದಿವಸಕ್ಕಂ ಅತಿಭಕ್ತಿಯಿಂದಂ ನಿಱಿಸಿ ತಾಂ ಪಕ್ಕದಿರ್ದು ದಿವ್ಯಾಹಾರಂಗಳನೂಡುತಿಂತು ಋಷಿಯರ್ಕಳ್ಗೆ ಬೆಸಕೆಯ್ಯುತ್ತಮಿರೆ[10] ಸ್ಕಂದಕುಮಾರ[11] ಋಷಿಯೊಡನೆ ವಾದುಗೆಯ್ದು ಸೋ[12]ಲ್ತೊ[12]ಡೆ ತನ್ನನಟ್ಟಿ ಕಳೆದುದು ಕಾರಣಮಾಗಿ [13]ವ್ಯಾಳ[13]ನೆಂಬಂ ಮಂತ್ರಿ ಋಷಿಯರ್ಕಳನಟ್ಟಿ ಕಳೆವುಪಾಯಮನೆ ಬಗೆಯುತ್ತಿರ್ಪೋನ್ ಒಂದು ದಿವಸಂ ಅಡವಿಗೆ ಪೋಗಿ ರಿಸಿಯರ್ಕಳ್ ಸಿದ್ಧಾಂತಮಂ [14]ಪರಿವಿಡಿಗೆಯ್ದು[ದಂ][14] ಕೇಳ್ದು ಪೊೞಲ್ಗೆವಂದ ಬೞಿಕ್ಕೆ ಅವರೋದುವ ಕ್ಷೇತ್ರದ ಸಾರೆಯೊಂದು ಗಿಡುವಿನ ಕೆೞಗೆ ಕೆಲ[15]ಪ್ರಮಾ[15]ಯುಧಂಗಳಂ ಪೂ[16]ೞ್ದು[16] ಬಂದರಸಂಗಿಂತೆಂದನೀಯಯ್ನೂರ್ವರುಂ ರಿಸಿಯರ್ಕಳುಮರಸುಮಕ್ಕಳ್ ಮಹಾಬಲ ಪರಾಕ್ರಮನೊಡೆಯರೀ[17]ರೂಪಂ ತೋಱಿ ನಂಬಿಸಿ ನಿಮ್ಮ ಪ್ರಾಣಕ್ಕಪಾಯಮಂ ಮಾಡಲ್ ಬಗೆದು ಬಂದರದೞಿಂ ಬಿಡದವರಲ್ಲಿಗೆ ಪೋಗಲ್ವೇಡ[18]ತ ಅವರುಮಂ ನಂಬಲ್ವೇ[18]ಡೆಂದೇಕಾಂತದೊಳ್ ಪೇೞ್ದು ಮತ್ತಮಿಂತೆಂದನೆರಡಱಿಯುಲಕ್ಕುಮವರಾಯುಧಂಗಳಂ ಪೂೞ್ದಿ[19]ರ್ದ[19]ರಪ್ಪುದಱಿಂ [20]ಕೊಲ್ವ[20]ರನಟ್ಟಿ ಅವರೋದುವ ಕ್ಷೇತ್ರದೆ ಬೞಸಿಯುಂ ನೋಡಿಸುವುದೆಂದು ಪೇೞ್ದೊಡರಸನುಮಾಳ್ಗಳಂ ನೋಡಿಮೆಂದು ಬೆಸವೇೞ್ದೊಡವರುಂ ಪೋಗಿಯವರೋದುವ ಕ್ಷೇತ್ರ[21]ದೊಳ್[21] ನೋಡಿ ಗಿಡುವಿನ ಕೆೞಗೆ ಪೂೞ್ದಿರ್ದಾಯುಧಂಗಳಂ[22] ತಂದರಸಂಗೆ ತೋಱಿದೊಡೆ ಅರಸನೆಂದಂ ರಿಸಿಯರೊಂದಿಱಿಪೆ [23]ಗಪ್ರಾಣಂ[23] ಪೊಲ್ಲ[24]ದಂ ಬಗೆ[24]ಯುದವರೆನಗಹಿತಮಂ ಬಗೆವರೆ ಪೊಲ್ಲದೊರಾ

1. (ಘಚಫ)ಗಳಲ್ಲಿಲ್ಲ. 2. ಬ್ಯಾಳಕ (ಕಗ). ವ್ಯಾಳಕ (ಖ). 3. ಬಾ (ಖಘಚಫ). 4. (ಘಚಫ)ಗಳಲ್ಲಿಲ್ಲ. 5. (ಘಚಫ)ಗಳಲ್ಲಿಲ್ಲ. 6. + ನೆಂಬ (ಕಖಗ). 7. + ಯುಂ (ಕಖಗ). 8. ಜ್ಜ ವರ್ಗೆ (ಕಖಗ), ಜ್ಜುವರ್ಗ್ಗನಿ (ಘಚಫ). 9. + ಕುಳ್ಳಿರ್ದು (ಘಚಫ). 10. + ಋಷಿ (ಕಗ). 11. + ನ ಮುಂತೆ ತಾಂ (ಘಚಫ). 12. ಲ್ತ (ಕಖಗಘಫ). 13. ಬ್ಯಾಳ (ಕಗ). 14. (ಘಚಫ)ಗಳಲ್ಲಿಲ್ಲ. 15. ಪಲವಾ (ಕಗ). 16. ೞ್ದಿಟ್ಟು (ಘಚಫ). 17. + ರಾಜ (ಘಚಫ). 18. (ಘಚಫ)ಗಳಲ್ಲಿಲ್ಲ. 19. ಮದ (ಘಚಫ)ಗಳಲ್ಲಿಲ್ಲ. 20. ನಂಬಬೇಡವ (ಕಖಗ). 21. ಮುಂಟು ಳಸಿಯುಂ (ಘಚಫ). 22. ತೆಗೆದುಕೊಂಡು (ಕಖಗ). 23. ಗೆ (ಕಖಗ) 24. ಗ್ಯ (ಕಗ).

ರಾಸುಂ ರಿಸಿಯರ್ಗೆ ಮುಳಿವರ್ ಪೊಟ್ಟಿರಕ್ಕುಮೆಂದರಸನುಂ ಕಡೆಗಣಿಸಿ ಕೆಮ್ಮಗಿರ್ದ್ದಂ[1]

ಮತ್ತೆ ಕೆಲವು ದಿವಸ[2]ದಿಂ ಭಂಡಾರದ ಮನೆಯೊಳ್ ಕನ್ನಮಿಕ್ಕಿಸಿ ಭಂಡಾರದ ಪುಡುಕೆಗಳಂ [3]ಪೋಟ್ಟು[ದ್ರ]ವ್ಯಮುಂ[3] ಪೊನ್ನುಂ ತುಡುಗೆಗಳು[4]ಮುಂ[4] ಸಾಲಿಟ್ಟಂತಿರೆ ಯುಗುತ್ತುಂ ನಡುವಿರುಳ್ ಕೊಂಡು ಪೋಗಿಯುಪರಿರ್ಪ ಬಸದಿಯೊಳಗೊಂದು ಕೋಣೆಯೊಳೊಟ್ಟಿರಿಸಿ ಬಂದು [5]ಪೊಟ್ಟುಡೆ[5] ಅರಸಂಗಿಂತೆಂದು ಪೇಳ್ದಂ ದೇವಾ ಭಂಡಾರದ ಮನೆಯೊಳ್ ಕನ್ನಮನಿಕ್ಕಿ ಭಂಡಾರಮೆಲ್ಲಮಂ ಕಳ್ದುಕೊಂಡು ಪೋದ ರೆಂದು ಪೇಳ್ದೊಡರಸನಾರ್ ಕೊಂಡರಾರಯ್ಯೆಂದು ತ[6]ಳಾ[6]ರಂಗೆ ಬೆಸವೇಳ್ದೊ ಡಾತನುಮಾರಯ್ದು ಬಂದು ದೇವಾ ರಿಸಿಯರ್ ಕನ್ನಮಿಕ್ಕಿ ತಮ್ಮ ಬಸದಿಯೊಳ್ ಕಸವರಮನೊಟ್ಟಿಟ್ಟು ಸಾಲಿಟ್ಟಂತಿರೆ ಬಸದಿವರೆಗಂ *[ದ್ರ]*ವ್ಯಮುಂ ಪೊನ್ನುಂ [7]ಸಾರಬೀದಿಯಾಗಿಯುಮುಗುತ್ತುಂ[7] ಪೋದುವೆಂದು ಪೇಳ್ದೊಡರಸನೆಂದಂ ರಿಸಿ ಯರ್ ಶ್ರಾವಕರ್ಗೆ ಕ[8]ಳ್ಳ[8]ದಿರಿಂ ಪೆಱರ [8]ವಸ್ತುವಂ ಕೊಳ್ಳದಿರಿಮೆಂ[8]ದು ವ್ರತಂಗಳಂ [10]ಕು[10]ಡುವರ್ ತಾಮೆ ಕಳ್ವರೆ ಆರಾನುಮವರ್ಗೆ ಮುಳಿ[11]ವರಿದಂ ಮಾಡಿದರೆಂದದುಮಂ ಕಡೆಗಣಿಸಿ ಕೆಮ್ಮಗಿರ್ದ್ದಂ

ಮತ್ತೆ ಕೆಲವು ದಿನದಿಂ ಮೇಲೆ ಸುಪ್ರಭೆಯೆಂಬ ಮಹಾದೇವಿಯೊಡನೆ ಮಂತ್ರಿ ಕಜ್ಜಮಂ ಸಮಕಟ್ಟಿಯೊಂದು ದಿವಸಂ ಪೂರ್ವ ಬೂತಿಂಗೆ [12]ದ್ರವ್ಯಮಂ ಕೊಟ್ಟೊಡಂ ಬಡಿಸಿ[12] ತಲೆಯಂ ಕಿರಿಸಿ ಕರಿಯ ಕೋವಣಮನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿ ಕುಂಚಮಂ [13]ಕೊ[13]ಟ್ಟಿಂತೆಂದಂ ನೀಂ ಮಹಾದೇವಿಯ ಮಂಚಮನಜದೇಱಿ ಆಕೆಯೊಡನೆ ನಗುತ್ತುಂ ತೆಗಟುತ್ತಮಿರೆಂದು ಕ[14]ಲ್ಪಿ[14]ಸಿದನನ್ನೆಗಮಿತ್ತರಸಂ ರಿಸಿ ಯರ್ಕಳೆಲ್ಲರು[15]ಮನೂಡಿ[15] ಕಟ್ಟಿಸಿದ ಬಟ್ಟಿಕ್ಕೆ ಬರ್ಪೊನನ್ನೆಗಮಾ ಬೂತುಮಾ ಪ್ರಸ್ತಾವದೊಳ್ ಪೋಗಿ ಮಹಾದೇವಿಯ ಮಂಚಮನೇಱಿರ್ದ್ದಾಗಳ್ ಅರಸಿ ಮಂಚದಿಂದಿೞಿದು ಕೈಗಳಂ ಮುಗಿದು ನಮೋಸ್ತುದೇವ[16]ನೆಂದು ನುಡಿ[16]ದೊಡಾತ ನಿಂತೆಂದಂ ನಿನಗಾಟಿಸಿ ಬೇಂಟಂಗೊಂಡು ಬಂದೆಂ ಪೆಱತೇನುಮಂ [17]ನುಡಿ[17]ಯ ದಿರಿತ್ತ ಬಾ ಎಂದು ಮಂಚದತ್ತ ಕರೆವುದನಿತೆಲ್ಲಮಂ ನೃಪತಿಗೆ ಮಂತ್ರಿ ತೋಱಿ ಇಂತೆಂದಂ ನೋಡರಸಾ ನಿಮ್ಮ ಸವಣರ ಗೊ[18]ಡ್ಡ[18]ಮಂ ನಿನ್ನಂ ಕೊಲ[19]ಲ್ ನೆಱೆದಾ[19]ಯುಧಂಗಳಂ ಪೂಟ್ಟಿಟ್ಟೊರೆಂದೊ[20]ಡಂ[20] ನಂಬಿ[21]ದೆಯಿ[21]ಲ್ಲ ಭಂಡಾರಮಂ

---

1. ರೆ (ಘಚಛ). 2. ಸಾಂತರ (ಕಗ). 3. ಪೊತ್ತು .. (ಕಖಗ), ಪೊಳ್ದು ದ್ರವ್ಯಮುಂ (ಜ), ಪೋಳ್ದುದುಮಂ (ಛ). 4. ಳ್ಮಂ (ಘಚಛ). 5. ಹೊತ್ತುಱೆ (ಕಗ), 6. ಳವಾ (ಛ). * ದ (ಸ). 7. ತುಡುಗೆಗಳುಂ ಮುತ್ತುಂ (ಘಚಛ). 8. ಳ (ಕಖಗಘಛ). 9. ಕಸವನೆರಂ (ಘಚ), (ಛ)ದಲ್ಲಿ ತ್ರುಟಿತ. 10. ಕೊ (ಕಗ). 11. + ದ (ಕಖಗ). 21. ದಮ್ಮಮು ನಾಂತವನ (ಜ). 13. ಕ (ಕಗ). 14. ಲಿ (ಘಚಛ). 15. ಮಂ ಜಂಗೆ ಮಾಡಿಸಿ (ಘಚಛ). 16. (ಖಘಛ)ಗಳಲ್ಲಿಲ್ಲ. 17. ಬಗೆ (ಘಚಛ). 18. ಡ್ಡಾಟ (ಕಖಗ). 19. ಲ್ಮಾ (ಖ), ಲಾ (ಘಛ), ಲೆಂದಾ (ಚ). 20. ಡಮಂ (ಘಚಛ). 21. ದಿರಿ (ಜ), (ಛ)ದಲ್ಲಿ ತ್ರುಟಿತ.

ಕಳ್ಬರೆಂ[1]ದೊಡಮಂ[1] ನಂಬಿ[2]ದೆಯಿಲ್ಲಮಾಗಳ್ ಪ್ರತ್ಯಕ್ಷಂ ನೋಡು ನಿನ್ನ ಮಹಾದೇವಿಯೊಡನೆ ಗೊ[3]ಡ್ಡಮಾ[3]ಡುಪ್ಪುದಂ ನಿನ್ನ ಪೆಂಡಿರುಮಂ ಬರ್ದುಂಕಲಿತ್ತಪ್ಪ್ರಿಲ್ಲೆಂದು ತೋಱಿ ಮುನಿಮುಖ್ಯರುಮಂ ಪುನ್ನ ಕುಱಿಯ ಗೋಣನೆಲ್ಲಮನಿವರೆ ಮಾಡಿದರೆಂಬೊಂದು ನಂಬುಗೆ ಮನದೊಳಾಗಿ ಮುನಿಮುಖ್ಯರ್ಕಳ್ಗೆ ಕಡುಮುಳಿದು ಮಂತ್ರಿಯು ನಿಂತೆಂದನಿವರ್ಗ್ಗೆ ತಕ್ಕ ನಿಗ್ರಹಮಂ ನೀ[4]ನಱಿದು[4]ಮಾಡೆಂ[5]ದು ಪೇೞ್ದೊಡಾತನುಮಂ[5]ತೆ ಗೆಯ್ವೆನೆಂ[6]ದೆಳ್ಳಗಾಣಂಗಳೊ[6]ಳಿಟ್ಟಯ್ನೂರ್ವರ್ ಮುನಿಮುಖ್ಯರ್ಕಳಂ ಪಿ[7]ೞಿ[7]ದು ಕೊಂದನವರುಂ ಶುಕ್ಲಧ್ಯಾನಂಗಳೊಳ್ ಕೂಡಿ ಮುಡಿಪಿದಂಬರುಂ ಸ್ವರ್ಗಂಗಳೊಳ್ ಪುಟ್ಟಿದರ್

ಮತ್ತವರೊಳಗೆ ಸ್ಕಂದಕುಮಾರನೆಂಬ ರಿಸಿ [8]ನಿರಪರಾಧಿಗಳಂ ನಿರ್ದೋಷಿಗಳಂ ನಿರರ್ಥಕಮಾ ಪಾತಕಂ ಕೊಂದನೆಂದು ತನ್ನಂತರಂಗದಲ್ಲಿ ನೈರಿಸಲಾಱದೆ ತೀವ್ರ ಕೋಪಂ ಪುಟ್ಟಿ ಕೈಮಿಗೆ ಆ ಪ್ರಸ್ತಾವದೊಳ್ ತೇಜೋಬುದ್ಧಿ ಪುಟ್ಟಿ ಘನರವದಿಂ[8] ಬಂದರಸನುಮಂ [9]ವ್ಯಾಳ[9]ನೆಂಬ ಮಂತ್ರಿ [10]ಮೊದಲಾಗಿ ಪ್ರೋಲೆಲ್ಲಾ ಪ್ರಜೆಯುಮಂ ಮತ್ತಮಾತನ ನಾ[11]ಡ ಸಮಸ್ತ ಜೀವರಾಶಿಗಳೆಲ್ಲಮನೆಯ್ದೆ ಸುಟ್ಟು ತನ್ನ ಶರೀರಮುಮಮಂ ಭಸ್ಮಂಮಾಡಿ ಸುಟ್ಟು ಸತ್ತೇ[11]ೞನೆಯ ನರಕಂಬೊಕ್ಕಂ

ಮತ್ತಿತ್ತ ದಂಡಕನೃಪತಿಯುಮೇೞನೆಯ ನರಕದೊಳ್* ಮೂವತ್ತುಮೂಱು ಸಾಗರೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿ†ಯಲ್ಲಿಂದಂ ಬಂದು ಸ್ವಯಂಭೂರಮಣ ಸಮುದ್ರದೊಳ್ ಮಹಾಮತ್ಸ್ಯಮಾಗಿ ಪುಟ್ಟಿ ಪಲವು ಜೀವಂಗಳಂ ಕೊಂದು ತಿಂದು ಸತ್ತಾಱನೆಯ ನರಕದೊಳ್ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿ† ಸತ್ತು ಬಂದಿಲ್ಲಿ ಸಿಂಹಮಾಗಿ ಪುಟ್ಟಿ ಸತ್ತಯ್ದನೆಯ ನರಕದೊಳ್ ಪದಿ[12]ನಯ್ದು[12] ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಪೆರ್ಮಾವಾಗಿ ಪುಟ್ಟಿ ಸತ್ತು ನಾಲ್ಕನೆಯ ನರಕದೊಳ್ ಪತ್ತು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಪುಲಿಯಾಗಿ ಪುಟ್ಟಿ ಸತ್ತು ಮೂಱನೆಯ ನರಕದೊಳ್ ಏೞು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಭೇರುಂಡ ಪಕ್ಕಿಯಾಗಿ ಪುಟ್ಟಿ ಸತ್ತು ಎರಡನೆಯ ನರಕದೊಳ್ ಮೂಱು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ಕೋಂಕನಾಗಿ ಪುಟ್ಟಿ

1. ದು ಪೇಳ್ದೊಡದುಮ (ಫಜಭ). 2. ದಿರಿಲ್ಲೀ (ಫಜಭ). 3. ಡ್ಡಾಟಮಾ (ಕಗ), ಡ್ಡಮಾ (ಖ). 4. ನೆ (ಫಜಭ). 5. ಬಱುಮಾತನಂ (ಫಜಭ). 6. ದು ಗಾಣದೊ (ಕಖಗ). 7. ರಿ (ಛ). 8. ಮುಳಿದು ನಿದಾನಂಗೆಯ್ದು ಸತ್ತು ಭವನವಾಸಿಗ ಲೋಕದೊಳ್ ಧರಣೇಂದ್ರನಾಗಿ ಪುಟ್ಟಿಯುಮವಧಿಜ್ಞಾನದಿಂದಱಿದು ತನ್ನ ಪಗೆಯನಿಱಿಯಲೆಂದು (ಫಜಭ). 9. ಬ್ಯಾಳಕ (ಕಗ), ವ್ಯಾಳಕ (ಖ). 10. + ಯುಮಂ (ಕಖಗ). 11. ಡುಮಂ ಸುಟ್ಟು ಕೊಲೆಯಿಂದಮ ಜೀವಂಗಳೇ (ಫಜಭ). *–* ಇಲ್ಲಿಂದ ಮುಂದಕ್ಕೆ, ಎಂದರೆ ೧೯೫ನೆಯ ಓಲೆಯಿಂದ, (ಜ) ಪ್ರತಿಯಲ್ಲಿ ನಷ್ಟವಾಗಿದೆ. ಪುಟ ೧೭೦–ಪುಟ ೧೭೮. †–† (ಕಖಗ)ಗಳಲ್ಲಿ ಈ ಭಾಗವಿಲ್ಲ. 12. ನೆಂಟು (ಕ), ನೆಳು (ಫಭ).

ಪಾಪಂಗೆಯ್ದು ಸತ್ತು ಪ್ರಥಮ ನರಕದೊಳೊಂದು ಸಾಗರೋಪಮಾಯುಷ್ಯಮ ನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದಿಲ್ಲಿ ತ್ರಸಸ್ಥಾವರಂಗಳೊಳ್ ಪುಟ್ಟಿ ಪಲಕಾಲಂ ಸಂಸಾರ ದುಃ[1]ಖಮನ[1]ನುಭವಿಸಿ ನೀಡಱಿಂದೆತ್ತಾನುಂ ಬಂದಿ[2]ಲ್ಲಿ ಜಟಾಯುವೆಂಬ ಪಕ್ಕಿಯಾಗಿ ಪುಟ್ಟಿ ರಾಮದೇವನ ಸಂಸರ್ಗದಿಂ ಜಿನಧರ್ಮಮಂ ಪೆತ್ತು ಪಂಚನಮಸ್ಕಾರದೊಳ್ ಕೂಡಿ ಸತ್ತು ಸ್ವರ್ಗದೊಳ್ ಪುಟ್ಟಿತ್ತು

ಮತ್ತೆ ಪೆಱರುಂ ಸಂನ್ಯಸನಂ [3]ಗೆಯ್ದು[2]ರ್ದ ಭವ್ಯರ್ಕಳ್ ಮಹೇಂದ್ರದತ್ತಂ ಮೊದಲಾಗೊಡೆಯ ಅಯ್ನೂರ್ವರ್ ರಿಸಿಯರ್ಕ[4]ಳ್[4] ಗಾಣದೊಳ್ ಬಿಟ್ಟಿ[3][5]ಸಿ ಕೊಂಡು[5]ದಂ ಮನದೊಳ್ ಬಗೆದು ಪಸಿವು ನೀರಳ್ಕೆ ಮೊದಲಾಗೊಡೆಯ ಪರೀಷ ಹಂಗಳಂ ಸೈರಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

1. ಖಂಗಳನಂತಾನಂತಮ (ಕಗ), ಖಂಗಳನನಂತಾನಂತಮ (ಖ). 2. ಬಂದೆಂತಾನುಮಿ ೧೦ (ಘಚ). 3. ಗೊಂಡಿ (ಘಚ). 4. ಳಂ (ಘಛ). 5. ದು ಕೊಂಡು (ಖಚಛ).

# (೧೮) ಚಾಣಾಕ್ಯರಿಸಿಯ ಕಥೆ

ಚಾಣಾಕ್ಯರಿಸಿಯ ಕಥೆಯಂ ಪೇೞ್ವೆಂ :

**ಗಾಹೆ** ॥ ಗೋಟ್ಠೇ ಪಾಓವಗದೋ ಸುಬಂಧುಣಾ ಗೊಬ್ಬರೇ ಪಳಿವಿದಮ್ಮಿ ।
ಡಜ್ಝಂತೋ ಚಾಣಕ್ಕೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಗೋಟ್ಠೇ—ತುಱುಪ[1]ಟ್ಟಿಯೊಳ್. ಪಾಓವಗದೋ—ಪ್ರಾಯೋಪಗಮನಕ್ಕೆ ಸಂದೊನಾಗಿ, ಸುಬಂಧುಣಾ—ಸುಬಂಧುವೆಂಬೊಂ ಮಂತ್ರಿಯಿಂದಂ. ಗೊಬ್ಬರೇ—ಗೊಬ್ಬರ[ದೊಳ್]ಪಳಿವಿದಮ್ಮಿ—ಉರಿ[2]ಪೆ[2]ಪಟ್ಟುದಾದೊಡೆ. ಡಜ್ಝಂತೋ—ಬೇ[3]ವು[3]ತ್ತಿರ್ದನಾಗಿಯುಂ, ಚಾಣಕ್ಕೋ—ಚಾಣಾಕ್ಯನೆಂಬ ರಿಸಿ. ಪಡಿವಣ್ಣೋ—ಪೊ[4]ರ್ದಿ[4]ದೊಂ, ಉತ್ತಮಂ ಅಟ್ಠಂ—ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯುಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದು ಪೊೞಲದನಾಳ್ವೊಂ [5]ನಂದವಂಶದೊಂ[5] ಪದ್ಮನೆಂಬೊ ನರಸನಾತನ ಮಹಾದೇವಿ [6]ಸುಂ[6]ದರಿಯೆಂಬೊಳಾಯಿರ್ವರ್ಗಂ ಮಗಂ ಮಹಾಪದ್ಮನೆಂಬೊಂ ಮಂತ್ರಿ [7]ಕಾ[7]ಪಿಯೆಂಬೊನಾತಂಗೆರಡನೆಯ ಪೆಸರ್ ವಿಶ್ವಸೇನನೆಂ[8]ಬುದಂ[8]ತವರ್ಗಳಿಷ್ಟವಿಷಯ ಕಾಮ ಭೋಗಂಗಳನನುಭವಿಸುತ್ತಿರೆ[9]ಯಿರೆ[9]

ಮತ್ತೊಂದು ದಿವಸಂ ಕಾಪಿಯೆಂಬ ಮಂತ್ರಿ ಸುಂದರಿ ಮಹಾದೇವಿಗೆ ಕಣ್ಬೇಟಂಗೊಂಡು ಅರಸನಂ ಕೊಂದರಸಿಯೊಳ್ ಬಾೞ್ವೆನೆಂಬ ಬಗೆಯಿಂದಂ ಪರಚಕ್ರದರಸುಗಳಂ ಪದ್ಮನ ಮೇಗೆೞ್ವಂತಿರೆ ಮಾಡಿಯರಸನನಿಂತೆಂದಂ ದೇವಾ [10]ನಿ[10]ಮ್ಮ ಸಾರಮಪ್ಪ ದ್ರವ್ಯ[11]ಮನಾರುಮಱಿಯ[12]ದಲ್ಲಿ[12] ಮಡಗಿ ನಾಮುಜ್ಜ ವಿಗ್ರಹದೊಳ್ ನಿಂದು ಕಾದುವಮೆಂದು ಪೇೞ್ದು ದ್ರವ್ಯಮನಿಡುವ ಪ್ರದೇಶಮಂ ತೋರ್ಪೆ ನೆವದಿಂ[13]ದರಸನಂ[13] ಬಯ್ಗುರುಳಿನ ಜಾವದಾಗಳ್ ಉದ್ಯಾನವನ[14]ಕ್ಕೊಡಗೊಂಡು[14] ಪೋಗಿ ಗುಂಡಿತಪ್ಪುದೊಂದು ನಾ*ಡೆ[15] ಕೆಸಱನೊ*ಡೆಯ ಪ[16]ೞ[16] ಪಾವಿಯ ತಡಿಯೊ[17]ಳಿ[17]ಱಿದು ಕೊಂದು ಬಾವಿಯೊಳ್ ನೂಂ[18]ಕಿ ದೆಸೆಗಳಂ ನೋೞ್ಪನನ್ನೆಗಂ[19] ಮರದ ಮೇಗಿರ್ದು ಪೂಗೊಯ್ವ ವಸಂತ[20]ಕ[20]ನೆಂಬ ಮಾಲೆಗಾಱ

---

1. ಳ್ಳ (ಕಗ). 2. ಯೆ (ಫ). 3. ವ (ಕಖಗಫ). 4. ಳ್ದಿ (ಕಖಗ). (ಫ)ದಲ್ಲಿಲ್ಲ, (ಫ)ದಲ್ಲಿ ತ್ರುಟಿತ. 5. ನಂದನವಂಶದೊಂ (ಕಗ). (ಫಫ)ಗಳಲ್ಲಿಲ್ಲ. 6. ಸೌಂ (ಕಗ). 7. ಕೋ (ಫಫ). ಬೊನಂ (ಕಖಗ). 9. ಪಲವು ಕಾಲಂ ಸಲೆ (ಖಫಫ). 10. ನ (ಫಫ). 11. + ಮೆಲ್ಲ (ಫಫ). 12. ದಂತಿರೆ (ಫಫ). 13. (ಫಫ)ಗಳಲ್ಲಿಲ್ಲ. 14. ಕ್ಕೆ (ಫಫ). *-* (ಫ)ದಲ್ಲಿ ತ್ರುಟಿತ. 15. + ಯೊಂ (ಫ). 16. ೞ (ಕಖಗಫ). 17. ಳ್ನಿ (ಕಗ). ಳಿರ್ದ (ಫಫ). 18. ಕ್ಕುಂ (ಕಗ). 19. + ಮತ್ತಿತ್ತ (ಫ). 20. (ಫಫ)ಗಳಲ್ಲಿಲ್ಲ.

ನರಸನ ಸಾವಂ ಕಂಡು ತನಗಂಜಿ ಪಾಯ್ದೋಡುವ ಭರ[1]ದಿಂ ಮರದಲುಗುವ[1] ಕೊಂಬಂ ಕಂಡಾದವಮಾನುಂ ಭಯಸ್ಥನಾಗಿ ವಿಶ್ವ[2]ಸೇನ[2]ನಿಂತೆಂದಂ

**ಶ್ಲೋಕ** ॥ ಯೇನೇಯಂ ಕಂಪಿತಾ ಶಾಖಾ ವಾನರೇಣ ವಾ ।
ಅಪಿ ವರ್ಷಸಹಸ್ರಾಂತಾತ್ ಮದ್ದೋಷಂ ಕಥಯಿಷ್ಯತಿ ॥

ಎಂದಿಂತು ಹೃದಯ ಸಂತಾಪ ಪರನಾಗಿ ತನ್ನ ಮನೆಗೆ ಪೋಗಿ ನೇಸಮೂರ್[3]ಡಿದೊಡ[3] ಸಾಮಂತ ಮಹಾಸಾಮಂತ[4]ರ್ಕಳೊಡನೆ [5]ಅರಮನೆಯ[5] ಓಲಗಕ್ಕೆ ಪೋಗಿ ಎಲ್ಲಾ [6]ಪೋಳಿಯುಮಜಿ[6]ಸಿಯರಸನಂ ಕಾಣದೆ ಕೃತಕ ದುಃಖಮನಾದಮಾನುಂ ಗೆಯ್ದು ಕೆಲದಿವಸ[7]ಮಂತಿ[7]ರ್ದು ಮತ್ತೆ ಪ್ರಶಸ್ತ [8]ದಿನ[8] ವಾರ ನಕ್ಷತ್ರ ಮುಹೂರ್ತದೊಳ್ ಮಹಾಪದ್ಮಂಗೆ ರಾಜ್ಯಾಭಿಷೇಕಂ ಗೆಯ್ದು ಪಟ್ಟಂಗಟ್ಟಿ ಸು[9]ಪ್ರ[9]ತಿಯೆಂಬರಸಿಗೆ ಮಹಾದೇವಿ. ಪಟ್ಟಂಗಟ್ಟಿ ಸುಂದರಿ ಮಹಾದೇವಿಯೊಡನೆ ಮಜಿ^ಪಾಳುತ್ತಿರ್ಕುಮಿಂತು ಪಲಕಾಲಂ ಸಲೆ

ಮತ್ತೊಂದು ದಿವಸಂ ಮಹಾಪದ್ಮನಿಂತೆಂದು ಬಗೆದನೆನ್ನ ತಂದೆಯ ಸಾವ [10]ನಿನಿತೊಂದು[10] ಮಹಾನಗರದೊ[11]ಳ್ ಆವನೊ[11]ರ್ವನಜಿ^ಯದಿರ್ಕುಮೆ ಆತನ ಸಾರಯ್ಪನೆಂದರಮನೆಯಿಂ[12] ಪೊಜಿಮಟ್ಟು [13]ಪೋಗಿ[13] ನಟ್ಟನಡುವಿರುಳ್ ಮಣಿಖೇಟ ಮಸುರದೊಳಮರ್ಜಿ ಕಿಟ್ಟಿ ಬಾಳ್ವೆರಸು ಮನೆ ಮನೆಯ ಜನಂಗಳ ನುಡಿಯುಂ ಕೇಳುತ್ತಮಂತೆ ಪೋಪನ್ನೆಗಂ ವಸಂತಕನೆಂಬ ಮಾಲೆಗಾಜಿನ ಮನೆಯನೆಯ್ದಿ ನುಡಿಯುಂ ಕೇಳ[14]ಲಿ[14]ರ್ದನನ್ನೆಗಂ ಆತಂ [15]ವನ[15]ಮಾಳಿಯೆಂಬ ತನ್ನ ಪೆಂಡತಿಯ ವಿಯೋಗದಿಂ [16]ಕಡು[16]ದುಃಖ[17]ದಿಂದಂ ಪೇಟ್ದುದಂ ಸಾ[17]ಭಿಪ್ರಾಯ ಸಂಬಂಧ [18]ಮಪ್ಪ[18] ವಚನಮಂ ಕೇಳ್ದನದೆಂತೆನೆ

**ಶ್ಲೋಕ** ॥ ನೀಲೋತ್ಪಲದಳಶ್ಯಾಮೇ ಬಾಲೇ ನೀಲಸರೋರುಹೇ ।
ದಹ್ಯೇಹಂ ತ್ವದ್ಗುಣೈರ್ಭದ್ರೇ ವಿಶ್ವಂ ಶಾಖೇನ ಕಂಪಿತಾ (?) ॥

ಈ ವಾಕ್ಯಾರ್ಥಮಂ ಕೇಳ್ದರೆಸನರಮನೆಗೆ ಪೋಗಿ ನೇಸಮೂರ್[19]ಡ[19] ಸಭಾಮಂಟಪದೊಳ್ ಸಿಂಹಾಸ[20]ನಾಸೀನ[20]ನಾಗಿ ಸಾಮಂತ ಮಹಾಸಾಮಂತರ್ಕಳಿಂ ಪರಿ[21]ವೇಷ್ಟಿ[21]ತನಾಗಿರ್ದು ಮಾಲೆಗಾಜಿಂಗೆ ಬಟಿಯಟ್ಟಿ ಬರಿಸಿ [22]ಎ[22]ಮ್ಮರಸನಂ ಕೊಂದವನಂ ನೀನಜಿ^ವೆಯುಂಜಪೆ ಪೇಟಲ್ಲ[23]ದಿರ್ದೊಡೆ[23] ನಿನ್ನಂ ಕೊಲಿಸಿದಪ್ಪೆ

1. ಯದಿಂ ಮರನಲಿಗಿದ (ಘಝ). 2. (ಖ)ದಲ್ಲಿಲ್ಲ. 3. ಡುವುದುಂ (ಘಝ). 4. ರೊ (ಘಝ). 5. ಯರಮನೆಗೆ (ಖ), (ಘಝ)ಗಳಲ್ಲಿಲ್ಲ. 6. ಊಳಿಗಮಂ ಮಜಿ^ಯಿ (ಘ), ಪೂಳಿಗಮಂ ಮಜಿಯಿ (ಝ), ಪುಜಿ^ ಎಂದಿರಬಹುದೆ? 7. ಮಾಣಿ (ಘಝ). 8. ದಿವಸ (ಖಘಝ). 9. ಬ್ರ (ಕಖಗ). 10. ನೀ (ಘ), (ಝ)ದಲ್ಲಿ ತ್ರುಟಿತ. 11. ಳಾರಾನುವೊ (ಘಝ), 12. + ದವೊರ್ವನೆ (ಘಝ), 13. (ಘಝ)ಗಳಲ್ಲಿಲ್ಲ. 14. ಲಿಂದಿ (ಘಝ). 15. ನವ (ಘಝ). 16. ದಾದ (ಘಝ). 17. ದುಂ ಸ್ವಾ (ಘಝ). 18. (ಘಝ)ಗಳಲ್ಲಿಲ್ಲ. 19. ಡುವುದುಂ (ಘಝ), 20. ನಮಸ್ಕೃತಸ್ಥಿತ (ಖಘಝ). 21. ದೃ (ಘಝ). 22. ಸಭಾಮಧ್ಯದೊಳಾತನನಿಂತೆಂದು ಬೆಸಗೊಂಡರೆ (ಘಝ). 23. ದಾಗಳ್ (ಖಘಝ).

ನೆಂದೊ[1]ಡೆ ಭಯದಿಂ ಬಿಡಿಪೆತ್ತುಮಾ[1]ತನಿಂತೆಂದು ಪೇೞ್ದಂ ದೇವಾ ಬಯ್ಗುರುಳಿನ ಜಾಮದಾಗಳ್ ವಿಶ್ವಸೇನನೆಂಬ ಮಂತ್ರಿಯರಸನನುದ್ಯಾನವನ[2]ಕ್ಕೊಡಗೊಂ[2]ಡು ಪೋಗಿ ಬಾವಿಯ ತಡಿಯೊಳಿರ್ದಿಱಿಂದು [3]ಕೊಂದು[3] ಬಾವಿಯೊಳ್ ನೂಕುವುದಂ ಮರನನೇಱಿ ಪೂಗೊಯ್ಯುತಿ[4]ರ್ದಾಂ[4] ಕಂಡೆತ್ತಾನುಮೆನ್ನುಮಂ ಕೊ[5]ಲ್ಗು[5]ಮೆಂದು ಭಯದಿಂ[6]ಪಾಯ್ದೋಡಿ ಕೆಟ್ಟೆ[6]ನಿದೆನ್ನ [7]ಕಂಡ[7] ವೃತ್ತಾಂತಮೆಂದಾಗಳಾತಂಗೆ[8] ಮೆಚ್ಚಿ ಬಿಚ್ಚಳಿಸಿ[8] ತನ್ನಂಗಚಿತ್ತಮುಮಂ [9]ಕೆಲವು ಬಾಟುಮಂ[9] ಕೊಟ್ಟಾತನಂ ಸಂ[10]ತಸಂ[10] ಬಡಿಸಿ ಮಂತ್ರಿಯ ಪೊಲ್ಲಮೆಯು[11]ನೆಲ್ಲರ್ಗ[11]ಱಿಯೆ ಪೇೞ್ದಾತನ ಪುತ್ರ ಮಿತ್ರ ಕಳತ್ರ ಸ್ವಜನ ಬಾಂಧವ ಸಹಿತಂ ಕೊ[12]ಲಿಸ[12]ಲ್ಬಗೆದೊಡೆ ಸಾಮಂತಾದಿಗಳ್ ಬಾರಿಸಿದೊಡಸು[13]ರುಮಂ[13] ನೆಲಮನೆಯೊಳಿಕ್ಕಿಮಲ್ಲ[14]ಲ್ ಪುಗುವನಿತು[14] ಬಾಗಿಲು ಮಾಡಿ [15]ಪ್ರತಿದಿನಕ್ಕೊಂ[15]ದು ಮಲ್ಲ[16]ಲ ಕೂ[16]ೞು[17]ಮನೊಂದು ಮೊ[17]ಗಪೆ ನೀರುಮಂ ನೆಲಮನೆಯೊಳಗಣ್ಗೆ ಸೀಡಿದೊಡನಿಬರುಂ ಪ*ಚ್ಚ*ಗೊಂಡುಣ್ಬರಿಂತು ಪಲದಿವಸಂಗಳ್ ಸಲೆ

ಮತ್ತೊಂದು ದಿವಸಂ ಕಾಪಿ ತನ್ನವರನಿಂತೆಂದಂ ಸಾಮಿಸು[18]ರುಂ ಸಾವರು ಮಲ್ಲ ಬಾೞ್ವರುಮಲ್ಲೆಮ್ಮೊಳಾ[18]ವನೊರ್ವಂ ನಮ್ಮ ಪಗೆಯನಿಱಿಯಲುಂ ನಂದನ ವಂಶಮಂ ನಿರ್ಮೂಲಂ ಮಾ[19]ಡಿ ಕಿಡಿಸಲುಮಾ[19]ರ್ಕುಮಾತನೀ ಮಲ್ಲ[20]ಲ ಕೂ[20]ೞ ನುಣ್ಗೆಂದೊಡೆ ಕಾಪಿಯ ಮಗಂ ಸುಬಂಧುವೆಂಬೊನಾ[21]ತನಿಂತೆಂದಂ ನಮ್ಮ ಪಗೆಯ ನಿಱಿಯಲುಂ[21] ನಂದನವಂಶಮಂ ನಿರ್ಮೂ[22]ಳಿಸಲಾನಾರ್ಪೆ[22]ನೆಂದು ಪೇೞ್ದೊಡಾತನ ನುೞಿಲ್ವೇೞ್ದು ಉೞಿದವರೆಲ್ಲಮುಣ್ಣ [23]ಪಟ್ಟು[23] ಸತ್ತರ್ ಸುಬಂಧುವೊರ್ವನುಂಡು ಬರ್ದೊನ್ ಇಂತು ಮೂಱುವರ್ಷಂ ಪೋದಿಂಬೞಿಕ್ಕೆ ಮತ್ತಿತ್ತ ಪ್ರತ್ಯಂತವಾಸಿಗಳಪ್ಪ ರಸುಗಳ್ ಮಸಗಿದೊಡೆ ಮಂತ್ರಿಯ ಗುಣಮಂ ನೆನೆದು ಬೆಸಗೊಂಡಂ ಮಲ್ಲ[24]ಲ[24] ಕೂೞನಾರಾನುಮಿನ್ನುಮುಣ್ಣ[25]ರೊಳರೆ ಎಂದು ಬೆಸಗೊಂಡೊಡೊ[25]ಳರೆಂದು ಪೇೞ್ದೊಡೆ ಸುಬಂಧುವಂ [26]ನೆಲಮನೆಯಿಂ[26] ತೆ[27]ಗೆ-[7]ಯಿಸಿ ಸನ್ಮಾನದಾನಂಗಳಿಂ[28]ದಾತನಂ[29] ಸತ್ಕರಿ[29]ಸಿ ಕ್ಷಮೆಗೊಳಿಸಿ ಮಂತ್ರಿಪದ[30]ಮಂ ಕೊಟ್ಟನಾತನುಂ[30] ಪರಚಕ್ರಮಂ

---

1. ಡವಭಯಮುಮಂ ಜೇಡಿಯಾ (ಖ), ಡಾತನಭಯಮುಮಂ ಬೇಡಿಯಾ (ಘಛ). 2. ಕ್ಕೆ ಕೊಂ (ಘ), (ಛ)ದಲ್ಲಿ ತ್ರುಟಿತ. 3. (ಘಛ)ಗಳಲ್ಲಿಲ್ಲ, 4. ರ್ದು ತನ್ನಂ ಕಂಡೆಂ (ಘಛ). 5. ಲ್ವನಕ್ಕು (ಘಛ). 6. ಕೆಟ್ಟೋಡಿಪೋದೆ (ಘಛ). 7. (ಘಛ)ಗಳಲ್ಲಿಲ್ಲ. 8. ಗೊಸೆದು (ಖಘಛ). 9. (ಘಛ)ಗಳಲ್ಲಿಲ್ಲ. 10. ತೋಷಂ (ಖಛ), ತೋಸಂ (ಘ). 11. ನ (ಘಛ). 12. ಲ (ಖಘಛ). 13. ಮ್ಮರ್ಗಂ (ಕಗ). 14. ಪ್ಪುಗುವಂತು (ಕಗ), ಪ್ಪುಗುವನಿತು ಕಿಱಿದಾನುಂ (ಘ), ಪ್ಪುಗುವನಿತು ಕಿಱಿದಾನುಂ (ಛ). 15. ದಿವಸಕ್ಕಮೊಂ (ಖಘಛ). 16. ಲುಗೂ (ಕಗ), ಲೂಕೂ (ಖ), ಲೂ (ಘ), ಲ್ಕೂ (ಛ). 18. ಮನೊಂದೊ (ಕಗ), ಮೊಂದುಮೊ (ಘಛ). *ರ್ಚು (ಖ). 18. ರುಮುಂ ಸಾಯದೆ ಯಾ (ಘಛ). 10. ಡಲಾ (ಘಛ). 20. ಲುಗೂ (ಕಗ), ಲ್ಲಲಕೂ (ಘ). 21. ತಂ (ಘಛ). 22. ಲು ಮಾಡಲಾರ್ಪೆ (ಘ). ಲಂ ಮಾಳ್ಪೆ (ಛ). 23. ದಿರ್ದು (ಘ), (ಛ)ದಲ್ಲಿ ತ್ರುಟಿತ. 24. ಲು (ಗ), 25. ರೆಯೆಂದೊಡುಮ್ಬರೊ (ಘಛ). 26. (ಘಛ)ಗಳಲ್ಲಿಲ್ಲ. 27. ಗ (ಗಘಛ). 28. ದಮಾ (ಘಛ). 29. ಪೂಜಿ (ಖಗಛ). 30. ಮಂ ಕೊಟ್ಟಾತನುಂ (ಕಗ), ಮನಾತನುಂ ಪೆತ್ತು (ಘಛ).

[1]ಮಸ[1]ಗಲೀಯದೆ ತನ್ನ ಬುದ್ಧಿ [2]ಕ್ರಮದಿಂ[2] ಪೂರ್ವಕ್ರಮದೊ[3]ಳ್[3] ನಿಱಿಸಿದೊಡರಸನಾತಂಗಾದಮಾನಂದೊಸೆದು ತಂದೆಯ ಬಾಟಿಂದಗ್ಗಳ [4]ಬಾಟಿಮೆಯುಂ[4] ಮಾಡಿ[5]ದಂ[5] ಮತ್ತೆರಡನೆಯ ಮಂತ್ರಿ [6]ಶಕಟಾಳ[6]ನೆಂಬೊನಾತನ ಮಗಳ್ ನಂ[7]ದ[7]ವತಿಯೆಂಬೊಳಾಕೆಯುಂ ಸುಬಂಧು ಮದುವೆನಿಂದು ಪ್ರಧಾನಮಂತ್ರಿಯಾಗಿ [8]ಇಷ್ಟವಿಷಯ[8] ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ

ಮತ್ತಿತ್ತ ಮಗಧೆಯೆಂ[9]ಬ[9] ನಾಡೊಳ್ ಶಾಲ್ಮಲಿ[10]ಯೆಂ[10]ಬಗ್ರಹಾರದೊಳ್ ಸೋಮಶರ್ಮನೆಂಬ ಪಾರ್ವಂಗಂ ಕಪಿಳೆಯೆಂಬ ಪಾರ್ವಂತಿಗಂ ಮಗಂ ನಾಲ್ಕು ದಾಡೆವೆರಸು [11]ಪುಟ್ಟಿದೊಡಾತಂಗೆ ತಾಯುಂ ತಂದೆಯುಂ ಚಾಣಾಕ್ಯನೆಂಬ ಪೆಸರನಿಟ್ಟರ್ ಮತ್ತೆ ದಾಡೆವೆರಸು[11] ಪುಟ್ಟಿದನೆಂಬುದಂ ನೈಮಿತ್ತಿಕಂ ಶ್ರಾವಕಂ ವಸಂತಕನೆಂಬೊಂ ಕೇಳ್ದಿಂ[12]ತೆಂದಾ[12]ದೇಶಂ ಗೆಯ್ದಂ

ಶ್ಲೋಕ ॥ ಸ ಚಾಣಾಕ್ಯಶ್ಚತುರ್ದಂಷ್ಟ್ರೋ[13][ಹ್ಯೇಷೋ][13] ನಂದಾನ್ವಯ ಕ್ಷಯಃ ।
ರಾಜೋ ವಾ ರಾಜ[14]ಮತ್ರ್ಯೋ[14] ವಾ ಭವಿಷ್ಯತಿ ನ ಸಂಶಯಃ ॥

ಎಂದಾದೇಶಂಗೆಯ್ದುದಂ ಚಾಣಾಕ್ಯನ ತಂದೆ ಕೇಳ್ದು ಕೈಸಾಣೆ[15]ಗಳಿಂ[15]ದಂ ನಾಲ್ಕುಂ ದಾಡೆಗಳನುರ್ದಿಸಿ ಕಳೆದು ಮಟ್ಟಂ ಮಾಡಿದೊಂ ಮತ್ತಂ ಚಾಣಾಕ್ಯನುಂ [16]ಬ[16]ಳೆದು ನಾಲ್ಕು ವೇದಮುಮಾಱಂಗಮುಂ ಪದಿನೆಂಟು ಧರ್ಮಶಾಸ್ತ್ರಂಗ[17]ಳುಂ[17] [18]ಮೀಮಾಂಸಾ[18] ವ್ಯಾಕರಣಂ ಪ್ರಮಾಣಂ ಛಂ[19]ದಮ[19]ಲಂಕಾರಂ ನಿಘಂಟು ಕಾವ್ಯ ನಾಟಕಂ ಶಾಲಿಹೋತ್ರಂ [20]ವೈದ್ಯ ಸಾಮುದ್ರಿಕಂ ನೀತಿಶಾ[21]ಸ್ತ್ರಂ[21] ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ಕಲ್ತು ಋಷಿಯರ ಪಕ್ಕದೆ ಧರ್ಮಮಂ ಕೇಳ್ದು ಶ್ರಾವಕವ್ರತಂಗಳಂ ಕೈಕೊಂಡು ಸಮ್ಯಗ್ ದೃಷ್ಟಿಯಾಗಿ ಪಲಕಾಲಂ ಸಲೆ ಮತ್ತೆ ಪಾಟಳೀಪುತ್ರ [22]ಪುರ[22]ಕ್ಕೆ[23] ಪ್ರೋದೊಡಾತನ ಪಾಂಡಿ[24][ತ್ಯ][24]ಮುಮಂ ಸ[25]ಮ್ಯಗ್ ದೃ[25]ಷ್ಟಿಯಪ್ಪುದುಮಂ ಭವ್ಯಾಕಾರಮುಮಂ ಶಕಟಾ[26]ಳಂ[26] ಕಂಡು ತನ್ನ ಕಿಱಿಯ ಮಗಳಂ ಯಶೋಮತಿಯೆಂಬೊಳಂ ಕೊಟ್ಟನಾತನುಮಾಕೆಯುಂ ಮದುವೆನಿಂದು ಸುಖದಿಂ ಕಾಲಂ ಸಲೆ

ಮತ್ತೊಂದು ದಿವಸಂ[27] ಶೋಣೆಯೆಂಬ ತೊಱೆಯ ತಡಿಯೊಳ್ ತನ್ನ ಕಾಲಂ

---

1. ಪು (ಘಛ). 2. ಯಿಂದಂ (ಖ), ಯಿಂ (ಘಛ). 3. ಳಿ (ಘಚ). 4. ಬಾಳಂ (ಖ). ದ ಬಾಳಂ (ಘಛ). ಬಾಟ್ಟಿ ಎಂದಿರಬಹುದೆ? 5. (ಕಖಗ)ಗಳಲ್ಲಿಲ್ಲ. 6. ಸಕಟಾಲಯ (ಕಖಗ). 7. ದಾ (ಘಛ). 8. (ಖಘಛ).ಗಳಲ್ಲಿಲ್ಲ. 9. ಬುದು (ಕಗ). 10. ಗ್ರಾಮಮೆಂ (ಘಛ). 11. (ಘಛ)ಗಳಿಲ್ಲ. 12. ತಾ (ಕಗ). 13. ದೇಷಾ (ಕ), ದೇಶ (ಘ), (ಛ) ದಲ್ಲಿ ತ್ರುಟಿತ. 14. ಮಂತ್ರೀ (ಘಛ). 15. ಯಿಂ (ಘಛ). 16. ಜ (ಕಗ), (ಘ)ವಲ್ಲಿ ತ್ರುಟಿತ. 17. ಳ್ಮಂ (ಘಛ). 18. (ಘಛ)ಗಳಲ್ಲಿಲ್ಲ. 19. ದಾ (ಕಗ), ದೋ (ಘಛ). 20. + ವಾಲಂ ಕಾವ್ಯಂ (ಘಛ). 21. ಸ್ತ್ರಮೆಂದಿವು (ಘಛ). 26. ಲಯಂ (ಕಖಗ). 27. + ಯಶೋಮತಿ ತನ್ನ ಭರ್ತಾರನಿಂತೆಂದಳ್ ಪಾಪಾರಂಭಮಿಲ್ಲದೆ ಬಿರಿದಪ್ಪ ವಿಭವದೊಳ್ (ಘೂತಿಯೊಳ್) ಕೂಡಿ ಬಾಳ್ವಮನೆ ಸ್ವಭಾರ್ಯೆಯ ಮತದಿಂ ರಾಜ್ಯಭ್ರಷ್ಟ್ಯೋದಾರಕಾನ್ ಪಾಕಯೇತ್ ಎಂಬೀ ನ್ಯಾಯದಿಂದ ಪೊಳಲ ಬಾಳ ಜನಂಗಳನೋಡಿಸುತ್ತಮಿರೆ ಮತ್ತೊಂದು ದಿವಸಂ (ಘಛ).

[1]ಗರ್ಭಾಂ[1]ಕುರಂ ನೆತ್ತರ್ವಾರೆ ಕೊಂಡೊಡೆ ಮುಳಿದವನಗುೞ್ದು ಸುಡುವೊನಂ ಸುಬಂಧು ಕಂಡು ತತ್ಸಂಬಂಧ[2]ಮೆಲ್ಲ[2]ಮಂ ಬೆಸಗೊಂ[3]ಡೊಡೆ[2] ಸ್ವವೈರಿ ವಿ[4]ಧ್ವಂಸನಂ[4] ಗೆಯ್ದಪ್ಪೆನೆಂದಱಿಯೆ ಪೇೞ್ದೊಡೆ ಸುಬಂಧು ಮುನ್ನಾದೇಶಮಂ ಕೇಳ್ದನಪ್ಪುದಱಿಂದಿಂತೆಂದಂ

**ಶ್ಲೋಕ** ॥ ಸ ಚಾಣಾಕ್ಯಃ ಚತುರ್ವಂಶ್ಯೋ [5][ದ್ವೇಷೋ][5] ನಂದಾನ್ವಯಕ್ಷಯಃ ।
ರಾಜೋ ವಾ ರಾಜ[6]ಮತ್ರ್ಯೋ[6] ವಾ ಭವಿಷ್ಯತಿ ನ ಸಂಶಯಃ ॥

ಎಂ[7]ಬ[7] ಶ್ಲೋಕಾರ್ಥಮಂ ಮನದೊಳ್ ಬಗೆದು ಸ[9]ಬಾ[9]ಯಿನಂ ಪೆತ್ತೆನೆಂದೊಸೆ[10]ದುಮಾ[10]ತನ ಬುದ್ಧಿಯುಮಂ ಪರೀಕ್ಷಿಸಲ್ವೇಡಿ ಘ[11]ಟ್ಟ[11]ಮಂಡಪದೊ[12]ಳ್[12] ಶ್ಲೋಕಮಂ ಬರೆದು ಪೋದಂ

**ಶ್ಲೋಕ** ॥ ಶ[13]ಕ್ಯಾ ಶಕ್ತಿ[13]ಸಹಸ್ರೇಣ [14]ನೀ[14]ತಿಶಾಸ್ತ್ರವಿಶಾರದೈಃ ।
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ ॥

ಈ ಬರೆದ ಶ್ಲೋಕಮಂ ಚಾಣಾಕ್ಯನೊಂದು ದಿವಸಂ ಕಂಡಿದು ನೀತಿಶಾಸ್ತ್ರದ ಬಲ್ಮೆಯುಳ್ಳೊಂದದಂ ಸೀಂಟಿ ತಾನಿಂತೆಂದು ಬರೆದಂ

**ಶ್ಲೋಕ** ॥ [15]ಶಕ್ಯಾ ಹ್ಯೇಕಶರೀರೇಣ[15] ನೀತಿಶಾಸ್ತ್ರವಿಶಾರದೈಃ ।
ವ್ಯವಸಾಯ ದ್ವಿತೀಯೇನ ಕೃತ್ಸ್ನಾ ಜೇತುಂ ವಸುಂಧರಾ ॥

ಅದಂ ಸುಬಂಧು ಕಂ[16]ಡು ಇದನಾ[16]ರ್ವರೆದರೆಂದು ಬೆಸಗೊಂಡೊಡೆ ಚಾಣಾಕ್ಯಂ ಬರೆದನೆಂದು ಪೇೞ್ದೊಡೆಯುದಂ ಕೇ[17]ಳ್ದಿದರ್ಕ[17]ನುಸಾರಿಯಪ್ಪ ಬುದ್ಧಿ[18]ಯುಮಂ[18]ಟೆಂದು ಮನದೊಳ್ ಬಗೆ[19]ದೊಂದು ದಿವಸಂ ತನ್ನ ಮಗ [20][ಳಾ]ಜೋಳಂಗಿಯೊಳ್[20] ಸ್ವಜನ ಬಾಂಧವಜನ ಪರಿಜನರ್ಕಳೆಲ್ಲರು[21]ಮಂ ಬರಿಸಿ[21] ದಿವ್ಯಾಹಾರಂಗಳನೂಡಿ[23] ವಸ್ತ್ರಾದ್ಯಾಭರಣಂಗಳಿಂ ಪೂಜಿಸಿ ಚಾಣಾಕ್ಯಂಗಂ ಯಶೋಮತಿ[23]ಗಂದಿರ್ವರ್ಗಂ ನಿಶ್ರಾವಮಂ[23] ತನ್ನ ಭಾರ್ಯೆಯಪ್ಪ ನಂ[24]ದ[24]ವತಿಯ ಕೆಯ್ಯೊಳಟ್ಟಿದೊಡೆ ಆಕೆಯುಮಂ ಕೊಂಡು ಪೋಗಿ ನಿಮಗಿರ್ವರ್ಗಂ ನಿ[25]ಶ್ರಾವ[25]ಮೆಂದು ಪೇೞ್ದು ಯಶೋಮತಿಗೆ ಕೊಟ್ಟು ಪೋದೊಡೆ ಚಾಣಾಕ್ಯಂ ಮನದೊಳಿಂತೆಂದು ಬಗೆದಂ ಲೋಕದೊಳ್

---

1. ವಸ್ತ್ಯಾರ (ಕ). 2. (ಘಛ)ಗಳಲ್ಲಿಲ್ಲ. 3. ಡಂಗೆ (ಘಛ). 4. ದ್ವೇಷಣಂ (ಘಛ). 5. ದೇಶ (ಘಛ). 6. ಮಂತ್ರೀ (ಘಛ). 7. ದೀ (ಘಛ). 8. ಕೆದ (ಖ). 9. ಹಾ (ಕಖಗ). 10. ದಾ (ಘಛ). 11. ಟ್ಟಿ (ಘಛ). 12. ಳು (ಛ). 13. ಕ್ಯಾಸಕ್ತ್ಯಪ್ತ (ಕಗ), ಕ್ಯಾಸಪ್ತ (ಖ), ಕ್ಯಾಶಕ್ತಿ (ಘ), (ಛ)ದಲ್ಲಿ ತ್ರುಟಿತ. 14. ಸಂ (ಘ). (ಛ)ದಲ್ಲಿ ತ್ರುಟಿತ. 15. ಶಕ್ಯಾಂ ಹಿ ಕಃ ಶರೀರೇಣ (ಕ), ಶಕ್ಯಾ ಹ್ಯನೇಕಶಃ ಸಂತಿ (ಘ), (ಛ)ದಲ್ಲಿ ತ್ರುಟಿತ. 16. ಡು ಇದಾ (ಘ), ಇದಾ (ಛ), 17. ಳ್ದು ರಾದ್ರಿಕೆಗೆ (ಘಛ) 18. ಯುಮಂ (ಘಛ). 19. + ದಿಂತಿರ್ಪುದಂ (ಘಛ). 20. ಳಂ ಜೋಳಂಗಿಯೊಳ್ (ಕಖಗ). ಳು ಜೋಳಗೆಯೊಳ (ಘ). ಳಂ ಜೋಗಳೆಯೊಳು (ಛ). 21. ಮನಾಮಂತ (ಘಛ). 22. + ನಿ (ಘಛ). 23. ಗಮೆಂದಿರ್ವಗ್ಗ್ರ ಮೊಂದು ನಿಶ್ರೇಯುಮ (ಘಛ). 24. ದಾ (ಘಛ). 25. ಶ್ರೀ (ಘ). (ಛ)ದಲ್ಲಿ ತ್ರುಟಿತ.

ದಾರಿದ್ರ್ಯದಿಂ ಬಿಟ್ಟು ಕಷ್ಟ[1]ತಿಕೆಯೊಂದುಮಿ[1]ಲ್ಲ ಆದುವೆ ಲೋಕದೊಳ್ ಮಹಾ ಪಾತಕ[2]ಮೆಂತು[2]ಮಿಂತೆಂಬುದಲ್ತೆ

ವೃ ॥ ಸಂಗಂ ನೈವ ಹಿ ಕಶ್ಚಿದೇವ ಕುರುತೇ ನಾಭಾಷತೇ ಬಾಂಧವಾತ್
ಸಂಪ್ರಾಪ್ತೇ ಗೃಹಮುತ್ಸವೇಽಪಿ ಗೃಹಿಭಿಃ ಸಾಮಾನ್ಯಮಾಲೋಕ್ಯತೇ ।
ದೂರಾದೇವ ಮಹಾಜನಃ ಪರಿಹರತ್ಯಲ್ಪಚ್ಛೆದಂ ಲಜ್ಜಯಾ
ಮನ್ಯೇ ನಿರ್ಧನತಾ ಪ್ರಕಾಶಮಪರಂ ಕಷ್ಟಂ ಮಹಾಪಾತಕಂ ॥

ಅದಱಿಂ ದ್ರ[3]ವ್ಯಾರ್ಜನೆಗೆಯ್ವೆನೆಂಬ[3]ಭಿಪ್ರಾಯದಿಂದಿರ್ಪಾತನಂ ಸಂಬಂಧು ಕೇ[4]ಳ್ದ ಱಿದೊಂ[4]ದು ದಿವಸಂ ಚಾಣಾಕ್ಯನಂ ಕಂಡಿಂತೆಂದಂ ನಿಮಗೆ ದಾರಿದ್ರ್ಯಮೋಕ್ಷ ಮಕ್ಕುಂ [5]ಷಷ್ಟಿ[5] ಗ್ರಾಮಸಮನ್ವಿತಮಪ್ಪ [6]ಅಗ್ರಾಸನ[6]ಮನರಸನಂ ಬೇಡಿಕೊಂಡೊಡೆ ಸುಖದಿಂ ಬಾಳ್ವಿರೆನೆ ಆತನುಮಂತೆಗೆಯ್ವೆನೆಂದರಸನಂ ಕಂಡುಪಶ್ಲೋಕಿಸಿಯಗ್ರಾಸ ನಮಂ ಬೇಡಿಕೊಂಡೊಡರಸನುಂ ಮೆಚ್ಚಿ ಕೊಟ್ಟನಿಂತಗ್ರಾಸನಮನುಣುತ್ತಮಱುವತ್ತು ಬಾಡಮನಾಳುತ್ತಂ ಸುಖ[7]ಸಂಕಥಾವಿನೋದ[7]ದಿಂ ಕಾಲಂ ಸಲೆ

ಮತ್ತೊಂದು ದಿವಸಂ ಸುಬಂಧು ಮಹಾಪದ್ಮನಂ ಕಿಡಿಸುವ ಬಗೆಯಿಂದಂ ನಂದನಕ್ರಮಾಗತರಪ್ಪ ಬ್ರಾಹ್ಮಣರ್ಕ[8]ಳ[8]ನಿಂತೆಂದಂ ನಿಮ್ಮಾ ಪದ[9]ಮೆಂ[9]ಬುದು ನಂದ[10]ಮಹಾರಾ[11]ಜ[11] ವಿಜಯ [೦] ನಂ[12]ದನಂ[12] ಸುನಂದನಂ ನಂದಿವರ್ಧ[13]ನಂ[13] ನಂದ[14]ನಂ ಶ್ರೀನಂದನಂ ಪದ್ಮಂ[14] ಮಹಾಪದ್ಮನೆಂದಿಂತು ಒಂಬತ್ತು ತಲೆವರೆಗಂ ಕ್ರಮಾಗತ ನಿಮಗೆ ಬಂದ[15]ಗ್ರಹಾರ[15]ಮಂ ಪೆಱರ್ ಕೊಂಡು ಬಾಳುತ್ತಿರೆ [16]ನಿಮಗೆ[16] ಕೆಮ್ಮನೆ ನೋಡುತ್ತಿರ್ಪು[17]ದೇಂ ಕಾರಣಂ[17] ಪಾೞಿಯೆಂದೊಡವರ್ಗ ಳಿಂತೆಂದರ್ ನಿಮ್ಮ ಬಲದಿಂದ[18]ಮಾಮೆಮ್ಮ ಪದಮಂ ಪಡೆವೆಮೆಂದೊಡೆ ಅಂತೆ ಗೆಯ್ಯೆಮೆಂದೊಡವರುಮರಸಂಗಿಂತೆಂದು ಬಿನ್ನಪಂ ಗೆಯ್ದರ್ ಮಹಾರಾಜಾ [19]ಕುಲಕ್ರಮಾಗತರೆಮುಂ[19] ನಿಮ್ಮ ಪ್ರಸಾದದಿಂ ಬಾಳ್ವೆ[20]ಮುಂ[20] ಕ್ರಮದಿಂ ಬಂದುದೆಮ್ಮ ಪದಮಂ ನಿಮಗೆ ಕಿಡಿಸಲಾಗದೆಂದಾಗಳ್ ಸುಬಂಧುವಿಂತೆಂದಂ ಕ್ಷತ್ರಿಯರ್ಗೆ ಪೂರ್ವಕ್ರಮಾಗತಮಂ ಕಿಡಿಸದೆ ಸಲಿಪ್ಪುದೆ ಧರ್ಮಮೆಂದೊಡರಸನ ಗ್ರಾಸನದಿಂ ಚಾಣಾಕ್ಯನಂ ಪಿಂಗಿಸೆಂದೊಡಂತಗೆಯ್ವೆನೆಂದು ಪೋಗಿಯಗ್ರಾಸನ ದೊಳುಣಲೆಂದು [21]ಬಂದು[21] ಮನೆಯುಮೇಱಿ[22]ರ್ದೋನನಂತೆಂದಂ ನಿಮಗಾದ ಮಾ[23]ನುಂ ಮುಳಿದರಸನಿಂತೆಂದಂ[23] ಮದವಿಪ್ಪಳಿಯರಪ್ಪ ವೇಶ್ಯಾಂಗನಾಸ[24]ಕ್ತವಿಟ

1. ತೆಯು (ಫಛ). 2. ಮುಮೆಂತು (ಕಖಗ). ಮಂತುಮಿಕ (ಫ), (ಛ)ದಲ್ಲಿ ತ್ರುಟಿತ. 4. ಳ್ದಿಂ (ಫಛ), ಶಿಷ್ಟ (ಕಗ). ಶಿಷ್ಟ (ಖ). 6. ಗ್ರಾಮ (ಫಛ). 7. (ಖಫಛ)ಗಳಲ್ಲಿಲ್ಲ. 8. ಳ್ಗೆಯಾತ ಕ(ಖಗ). 9. ಮಿಮೆಂ (ಫಛ). 10. + ನ (ಫಛ). 11. ಜ (ಕಖಗ). 12. ದಂ (ಫಚ). 13. ನ (ಕಖಗ). 14. ಶ್ರೀನಂದನ ಪದ್ಮ (ಕಖಗ). 15. ಗ್ರಾಸನ (ಫಚ). 16. (ಫ)ದಲ್ಲಿಲ್ಲ, (ಛ)ದಲ್ಲಿ ತ್ರುಟಿತ. 17. ದು (ಫಚ). 18. ಮುಮ್ಮ (ಕಖಗ). 19. ನಿಮ್ಮ ಧರ್ಮದವರೆ ಉ (ಫಚ). 20. ಉ (ಫ). ವು (ಛ). 21. (ಫಚ)ಗಳಲ್ಲಿಲ್ಲ. 22. ದ್ವಾರ (ಕಖಗ). ನಮರಸಂ ಮುಳಿದಂ (ಫಛ). 24. ಕ್ತಂ ವಿ (ಫಛ).

ಸಾಮಂತರ್ಕಳ್ಗಮಲ್ಲಿಯ ಮಂತ್ರಿಯರ್ಕಳ್ಗಮರಸು ಮಕ್ಕಳ್ಗಂ ತಳವ[ಱ]ರ್ಕಳ್ಗಮಿಂತೆಂದು ನುಡಿಪೋಂ† ಚಂದ್ರಗುಪ್ತಂ[1]ಗೆ[1] ಪೃಥ್ವಿಯೆಲ್ಲಮನಾಳ್ವ ಲಕ್ಷಣಂಗಳೊಳವು ಈತಂಗರಸು ಮಾಡಿದಪ್ಪೆಂ ನಿ[2]ಮಗೆಲ್ಲ[2]ಮಿಲ್ಲಿಯ ಬಾ[ೞ್ವಿನ್] ಪದಿರ್ಮಡಿ[3] ಬಾೞಂ ಮಾಡುವೆನೆಂ[4]ದು ಬೋಧಿ[4]ಸಿಯೊಡಂಗೊಂಡು ಪೋಗಿ ಮತ್ತಂ ಪೆಱರುಮಂ[8] ನೆರಪಿ ಪಿರಿದುಂ ತಂತ್ರಮಂ [5]ಮಾ[5]ಡಿ ಶ್ರೀಪರ್ವತದ ಮೇಗನಿಬರುಮನಿರಿಸಿ ತಾನೊರ್ವ*[ನೆ]* ಪೋಗಿ ಪೊನ್ನಂ ಮಾಳ್ಪ ಬಗೆಯಿಂದಂ ಮರ್ದುಗಳನಱ[6]ಸಿ ಸುತ್ತಂ[6] ತೊೞಲ್ವನನ್ನೆಗಂ ಪರ್ವತದ ತ[7]ಟ್ಟ[7]ಲೊಳಾದಮಾನುಂ ಗುಂಡಿತಪ್ಪ ರಸದ ಬಾವಿ[8]ಯುಂ[8] ಪೊಡೆನಾರ್ವುದಂ ಕಂಡು ಮುಚ್ಚಿದ ಶಿಲೆಯುಂ ಕಳೆದು ನೋೞ್ಪನನ್ನೆಗಮದಱೊ[9]ಳೊ[9]ರ್ವಂ ಬಾೞುತ್ತಿರ್ದ ಪುರುಷನಂ ಕಂಡು ನೀನೇ[10]ಕಿಲ್ಲಿ ಪೊಕ್ಕಿರ್ದೆ[10]ಯೆಂದು ಬೆಸಗೊಂಡೊಡಾತ[11]ನೆಂದ[11]ನೊರ್ವ ರ[12]ಸವಾ[12]ದಕನೆಂಬ [13]ಬಿಚ್ಚುವ[13]ನೀ ಬಾವಿಯೊ[14]ಳಗಿೞಿದು[14] ನೀನೀ ರಸಮಂ[16] ಪೊಗೆದು ಕೊಟ್ಟೊಡದಱೊಳ್ ಮಾಡಿದ ಪೊ[16]ನ್ನು ನಿನಗಮೆನಗಂ ಸಮಭಾಗಮಕ್ಕು[16]ಮೆಂದೊಡಾಂ ಪೊನ್ನಲೋಭದಿಂದಂ [17]ಬಾವಿಯುಂ[17] ಪೊಕ್ಕು ರಸಮಂ ಸೋರೆಯಿಂ ತೀವಿ ಬೇೞ್ಪನಿತುಮಂ ಪೊಗೆದು ಕೊಟ್ಟೊಡಾತನೆನ್ನಂ ತೆಗೆಯದೆ ಪೋದನಂತೆ ಮುನ್ನಂ [18]ಪಲಂಬರುಮನೀ ಮಾರ್ಗದಿಂ ಬಾವಿಯೊಳಗೆ[18] ಪುಗಿಸಿ ರಸಮಂ ಕೊಂಡವರಂ ತೆಗೆಯದೆ ಕೊಂದನೆಂದು ಪೇೞ್ದೊಡಾಂ ನಿನ್ನಂ ತೆಗೆದು ಬಾೞಿಪ್ಪೆನೆನಗೆ ರಸಮಂ [19]ಪೊ[19]ಗೆದು ಕುಡೆಂದು ನಿಡುನೇ[20]ಣಂ[20] ಪಲವುಂ ಸೋರೆ[21]ಗಳುಮಂ ತಂದು ತೀವಿಸಿ ಕೊಂಡಾತನುಮಂ [21]ತೆಗೆದು ರಸ[ಂ][22] ತಿಂ[22]ದ ಮೆಯ್ಗೆ ತಕ್ಕ ಪ್ರತೀಕಾರದ ಮರ್ದುಗಳಂ ಮಾಡಿಯಾತನಂ ಬಾೞಿಸಿ ಕಳಿಪಿದಂ

ಮತ್ತಾ ರಸದಿಂ[23]ದನಿತಾನುಂ ಪೊನ್ನರಾಶಿಯುಂ[23]ಮಾಡಿ ಇಂತೆಂದನಾರೊರ್ವರೊಂದು ಪೇಱು ಮಣ್ಣಂ [24]ಶ್ರೀಪರ್ವತದ[24] ಮೇಗೊಟ್ಟು[25]ವರವ[25]ರ್ಗೊಂದು ಪೇಱು ಪೊನ್ನಂ ಕುಡುವೆನೆಂ[26]ದಾ ನಾಡೊಳ್ ಘೋಷಣೆಯುಂ ಪೊಯ್ಸಿ[26]ದೊಡದಂ ಕೇಳ್ದೊರ್ವನೊಕ್ಕಲಿಗನೊಂದು ಪೇಱು ಮಣ್ಣಂ ತಂದು ಶ್ರೀಪರ್ವತದ ಮೇಗೊಟ್ಟಿ

---

† ಪಾಠಾಂತರ ಹಿಂದಿನ ಪುಟದಲ್ಲಿದೆ. 1. (ಘಚಛ)ಗಳಲ್ಲಿಲ್ಲ. 2. ವರ್ಗೆ (ಘಚಛ). 3. ೞ್ಗಂ ಪದಿರ್ಮಡಿ (ಕಖಗ), ೞ್ಗೆ ಪೆಂಡಿರ್ಮಾಡಿ (ಘಚಛ). 4. ,ದೆಲ್ಲರುಮಂ ಭೇದಿ (ಘಚಛ). 5. ಕೂಡಿ (ಘಛ), (ಚ)ದಲ್ಲಿ ತ್ರುಟಿತ. *ನುಂ (ಕಖಗಘಛ), (ಛ)ದಲ್ಲಿ ತ್ರುಟಿತ. 6. (ಘಛ). (ಚ)ದಲ್ಲಿ ತ್ರುಟಿತ. 7. (ಕಗಘಛ). 8. ಯುಂ (ಸ–ಕ). 9. ೞಗೆ (ಖಘಚಛ). 10. ಕೆ ಇಲ್ಲಿ ಪೊಕ್ಕಿರ್ದಪೆ (ಘಛ), ಕೆ ಇಲ್ಲಿರ್ದಪೆ (ಘ). 11. ನಿಂತೆದನೆನ್ನ (ಘಛ), (ಚ)ದಲ್ಲಿ ತ್ರುಟಿತ. 12. ಸಮೋ (ಘಛ), ಸಾಮೋ (ಚ). 13. ಭಿಕ್ಷುಕ (ಕಖಗ). 14. ಳಿನ್ನನಿಂತೆಂದು ಪುಗಿಸಿದಂ (ಘಚಛ). 15 +ತೆಗೆದು (ಬ). 16. ನಿನ್ನಗಂ ಸಮಾನ ಭಾಗ (ಘ), ನ್ನೆನಗಂ ನಿನಗಂ ಸಮಭಾಗ (ಚ) ನಿನಗಂನ್ನೆನಗಂ ಸಮಾನಭಾಗ (ಛ). 17. (ಘಛ)ಗಳಲ್ಲಿಲ್ಲ. (ಚ)ದಲ್ಲಿ ತ್ರುಟಿತ. 18. ಪೆಱರುಮನೀ ಬಾವಿಯೊಳ್ (ಘಚಛ). 19. ತೆ (ಘಛ). 20. ೞ್ಗೊಳ್ (ಗಚಛ). 21. ಳಂ ಕಟ್ಟಿ ರಸಮಂ ತೀವಿಕುಡೆ ತನ್ನುಮಂ (ಘಚಛ). 22. ಮಂ ತೀವಿ (ಘಛ) (ಚ)ದಲ್ಲಿ ತ್ರುಟಿತ. 23. ರಾಸೋಪರಾಶಿ ಪೊನ್ನಂ (ಗ). 24. ದವ (ಕಖಗ). (ಘಚಛ) ಗಳಲ್ಲಿಲ್ಲ.

ದೊಡಾತಂಗೊಂದು ಪೇೞ್ ಪೊನ್ನಂ ಕೊಟ್ಟೊಡದಂ [1]ಕೇಳ್ದು[1] ನಾಪೊಕ್ಕಳಿಗರೆಲ್ಲಂ ಮಣ್ಣ ಪೇಱಂ ತಂದು ಶ್ರೀಪರ್ವತದ ಮೇಗೆ ಬಳಸಿಯುಂ [2]ಪಿರಿದುಂ[2] ರಾಶಿಯಾಗೊಟ್ಟಿ ಚಾಣಾಕ್ಯನಂ ಪೊನ್ನಂ ಬೇಡಿದೊಡಿಂತೆಂದಂ ನಿಮ್ಮ ತರವೇೞ್ದೊ[3]ರಾ[3]ರೆಮಗೊಂದು ಪೇೞ್ ಮಣ್ಣ ಬಾ[4]ೞ್ತ್ತಿ[4]ಯಾಗೆ ತರಿಸಿಕೊಂಡೆವೀಯೞ್ದ ಮಣ್ಣೆಮಗೆ ಬಾ[4]ೞ್ತ್ತಿ[4]ಯಲ್ಲು ನಿಮ್ಮ ನಿಮ್ಮ ತಂದ ಮಣ್ಣಂ ಕೊಂಡು ಪೋಗಿ ಮುಂದೊಡವರ್ಗಳ್ ನಿರಾಶೆಯಾಗಿ ಬಿ[5]ಸು[5]ಟ್ಟು ಪೋದರ್ ಮತ್ತಾ ಮಣ್ಣಿಂದಂ ಬಳಸಿಯುಂ ಕೋಟೆಯುಂ ಮಾಡಿ[6] ಮಾಟಕೂಟ ಪ್ರಾಸಾದ ಸಹಿತಂ ಪೊೞಲು ಮಾಡಿ ಪೊನ್ನಂ ಕೊಟ್ಟು ಪಲವುಂ ಕುದುರೆಗ[7]ಳು[7]ಮಂ ಕಟ್ಟಿಯಾಳ್ಗಳ್ಗೆ ಕೊಟ್ಟು ಪಿರಿದುಂ ತಂತ್ರಮುಂ ಮಾಡಿ ಚಂದ್ರಭುಕ್ತನನೊಡಗೊಂಡು ಪೋಗಿ ಮಹಾಪದ್ಮನ ಪೇ[8]ರ್ಗೆ[8]ದಾರ್ತನೊಳ್ ಕಾದಿ ಕಾಳೆಗಮಂ ಸೋಲ್ತೋಡಿ [9]ಬರ್ದುಂಕಿ[9] ಮತ್ತಂ ತಂತ್ರಮಂ ಮಾಡಿ [10]ವರುಷವರುಷ[10]ಕ್ಕಂ ಪೋಗಿ ಕಾದಿ ಸೋಲ್ತುಬರ್ಕುಂ ಮತ್ತೊಮ್ಮೆ ಪೋ[31]ಲೆಟ್ಟು ಬವರಮಂ[11] ಕಾದಿ ಸೋಲ್ವ ಕಾಳೆಗಮನಱಿದು ಚಂದ್ರ[12]ಭುಕ್ತ[12]ನಂ ಪೋಗಲ್ವೇೞ್ದು [13]ತಾನುಂ ನೀಡುಂ ಬೇಗಂ[13] ಕಾದಿ ಕಾಳೆಗಮಂ ಸೋಲ್ತು ಕೊ[14]ಳ್ಗುಳದೊಳಗಿ[14]ರ್ದಾಗಳ್ ಪೋಗಲ್ ಪಾಂಗಿಲ್ಲದೆ ನಾರೆಯೊಂದು ತಾವರೆಗೆೞಿಯುಂಟದಂ ಪೊಕ್ಕು ನೆರವಿಯೆಲ್ಲಂ ಪೋಪನ್ನೆಗಮಿರ್ದು ಇರುಳ್ ಪೊಱಮಟ್ಟು ಪಾಟಲೀಪುತ್ರಮಂ ಪೊಕ್ಕು ಪಸಿದು ಸಾಲಿಗರ ಮನೆಯಂ ಪೊಕ್ಕು ಸಾಲಿಗರ ಬಿರ್ದ್ದಿಯನುಣಲ್ವೇಡಿದೊಡಾಕೆಯುಂ ಕುಳ್ಳಿರು ಮಗನೆಯೆಂದೇೞಲಿಕ್ಕಿ ಕುಳ್ಳಿರಿಸಿ ಕಂಚನಿಟ್ಟು ಬಿಸಿಯಂಬಲಿಯಂ ಬಡ್ಡಿಸಿದೊಡಾತನುಂ ಪಸಿ[15]ದಲಂಪಿ[15]ನಿಂದಂ ಬಿಸಿಯಂಬಲಿಯುಂ[16] ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮುಯ್ಯನ[17]ದಿ[17]ರ್ದು ಕೈಯುಂ ಬಿದಿ[18]ರ್ದವ[18]ನಂ ಬಿರ್ದಿ ಕಂಡು ನಕ್ಕಿಂತೆಂದಳ್

ಈ ಲೋಕದೊಳ್ ಮೂವರ್ ಮೂರ್ಖರಂ ಕಂಡೆನೆಂದೊಡೆ [19]ಚಾಣಾಕ್ಯನವರಾರಬ್ಬೆಯೆಂ[19][20]ದು ಬೆಸಗೊಂಡೊ[20]ಡಾಕೆಯಿಂತೆಂದಳ್ ನೀನು[23] ನಂದನುಂ ಚಾಣಾಕ್ಯನು[21]ಮೆಂದು ಪೇೞ್ದೊಡಾನೆಂತು ಮೂರ್ಖ[22]ನೆಂದು ಬೆಸಗೊಂಡೊಡೆ ಮಗನೆ ಬುದ್ಧಿಯೊಡೆಯೊನ್ ಬಿಸಿಯಂಬಲಿಯುಂ ಕಂಚಿನ [23]ಕಡೆಕದೆಯೊಳ್[23] ಕಿಱುಕಿಱಿದ[24]ನೆ [ಆ][24]ಱಿಸುತ್ತಮುಣ್ಗು ನೀನಂತುಣಲಱಿಯದುದಱಿಂ ಮೂರ್ಖನನೆ

1. ಕಂಡುಂ ಕೇಳ್ದುಂ (ಘಫ). (ಚ)ದಲ್ಲಿ ತ್ರುಟಿತ. 2. (ಛ)ದಲ್ಲಿಲ್ಲ. 3. ದೊ (ಕಗ). 4. ತೆಗ (ಕಖಗ), (ಛ)ದಲ್ಲಿ ತ್ರುಟಿತ. 5. (ಘಫ)ಗಳಲ್ಲಿಲ್ಲ. 6. + ಸಿ (ಘಫ). 7. ಳ್...(ಕಗ), ಳುಮಾಗಳುಮುನಾಳ್ದು (ಘ). ಮನಾಳ್ಗಳುಮನಾಳ್ದು (ಛ). 8. ಲೆ (ಘಫ). 9. ಬಂದು (ಘ). 10. ಬಂಸಬಂಸ (ಘಫ). 11. ಲೆಯುಬವರಮಂ (ಕಗ). ಲೆಳ್ದ್, ಬವರಮಂ (ಛ)ದಲ್ಲಿ ತ್ರುಟಿತ. 12. ಗುಪ್ತ (ಕಗ). (ಚಛ)ಗಳಲ್ಲಿ (ಖ), ಮರ್ × ಪಲ್ಮರೆಗಂ (ಘ). ಮರ್ ಪಗಲ್ಮರೆಗಂ (ಫ). 13. ತಾಂ ನಂಜೆ ವರೆಗಂ (ಘಫ). (ಚ)ದಲ್ಲಿ ತ್ರುಟಿತ. 14. ಳಗುಳದೊಳ್ (ಕಗ). ತ್ರುಟಿತ. ಳಗುಳಂಗಳೊಳ್ (ಖ), ಳುವಳದೊಳಗಿ (ಫ). 15. (ಕ)ದಲ್ಲಿ ತ್ರುಟಿತ. ದ ಅಳ್ಟ್ (ಖಗ). 16. + ಕೊಂಡು (ಘಚಫ). 17. ಡ (ಕ), ಡಿ (ಗ). 18. ದವ (ಖ), ರ್ಪೊರ್ (ಘಫ), ದೊರ್ (ಚ). 19. ಚಕ್ಕಸಂಬಿಟ್ಟು (ಘಚಫ). 20. ದೊ (ಕಗ). 21. ಚಾಣಾಕ್ಯನುಂ ನಂದನು (ಘಚಫ). 22. + ನೆ (ಘ). 23. ಕೆಲಕ್ಕೆ ಸಾರ್ಚಿ (ಘಚಫ). 24. ನೆಯಾ (ಕಖಗ), ನಾ (ಘಚಫ).

ನಂದನೇಂ[1] ಮೂರ್ಖನೆಂದೊಡೆ ನಂದನೆಂದೊಡಂ ಮಹಾಪದ್ಮನೆಂದೊ[2]ಡಮೊರ್ವ[2]ನ[3] ಪೆಸ[3]ರೆ [ಅ][4]ತಂ ತನ್ನ ಕೊಟ್ಟ ದಾನಮಂ ಕುಡದುದಱಿಂ ಪಗೆಗೊಂಡು ಪೋ[4]ಪನಂ[5] ತನ್ನಾರ್ಪಿನ ಕೊಲ್ಲದುದಱಿಂದಂ ನಂದಂ ಮೂರ್ಖಂ ಚಾಣಾಕ್ಯನೆಂತು ಮೂರ್ಖ[6]ನೆಂ[6]ದೊಡಿಂತೆಂದಲ್ ಚಾಣಾಕ್ಯಂ ತನ್ನ ಮುಳಿಸನೆ ನೋ[6]ಟ್ಟುಂ[7] ಕಜ್ಜಮನಱಿಯಂ [7]ಮೂಲತಂತ್ರಮನೊಡೆಯನಂ ಕ್ಷತ್ರಿಯ[8]ನುಮ[8]ಲ್ಲಂ ಪೃಥ್ವೀಶ್ವರನೊಡಲ್ ಕಾದಲ್ ಬರ್ಕುಮಾತಂಗೆ ಬುದ್ಧಿಯುಳ್ಳೊಡೆ ತನ್ನ ಪಗೆವ[9]ನ ನಾಡಂ[9] ಕಿಡಿಸುವುದು ಪ್ರತಿಪಕ್ಷಮಂ ತನಗೆ ಮಾ[10]ಡುವುದು ಸಾಮಂತ ಮಹಾಸಾಮಂತರ್ಕ[11]ಳಂ[11] ದ್ರವ್ಯಮಂ* ಕೊಟ್ಟು ಭೇದಿಸುವುದು ತತ್ಸಂಬಂಧಿಗಳಂ ಪ್ರತಿಪಕ್ಷ[12]ದಿಂದಂ[12] ಕಿಡಿಸುವುದುಮಿಂತು ಮಾಡಿದೊಡೆ ನೃಪತಿಯೊರ್ವನೆಯುೞಿಗುಮಾಗಳ್ ತನ್ನ[13] ಬಗೆದ ಕಾರ್ಯ[13] ಸಿದ್ಧಿಯಕ್ಕುಮೆಂದೊಡಬ್ಬಾ ನಿಮ್ಮ ಪೇೞ್ದಂತುಟೆ ಕಜ್ಜಮೆಂ[14]ದುಂಡು[14] ಪೊಱಮಟ್ಟು ಶ್ರೀ ಪರ್ವತಕ್ಕೆ ಪೋಗಿ ಪಿರಿದು ತಂತ್ರಮಂ ಮಾಡಿ ಸಾಲಿಗರ ಬಿ[15]ದ್ದಿರ್ಗಿಯು[15] ಪೇೞ್ದಂತೆ ನಂದನ ನಾಡಂ ಕಿಡಿಸಿ ಸಾಮಂತ ಮಹಾಸಾಮಂತರ್ಕ[16]ಳಂ[16] ದ್ರವ್ಯದಿಂ ಭೇದಿಸಿ ತತ್ಪ್ರತಿಪಕ್ಷಮಂ [17]ತನ್ನಂತೆ[17]ಮಾಡಿ ತತ್ಸಂಬಂಧಿ[18]ಗಳಂ ಪ್ರತಿಪಕ್ಷದಿಂದಂ[18] ಕಿಡಿಸಿ ನಂದನೊರ್ವನೆ ಉೞಿ[19]ದಾಗಳ್[19] ಚಂದ್ರಭು[20]ಕ್ತಂ ಬೆರಸು ಸಮಸ್ತ ಬಲಮೆಲ್ಲಮಂ ಕೂಡಿಕೊಂಡು[20] ಮೇಲೆರ್ದು ಕಾದುವಾಗಳ್ ಮಹಾಪದ್ಮನ ಸಾಮಂತ[21]ಮಹಾಸಾಮಂತರೊ[21]ಡ್ಡಣಮನೊಡ್ಡಿ ದೊರ್ಗರಂ ಕಾದ [22]ಪೇೞ್ದೊಡಂ[22] ಕಾದಲೊಲ್ಲದೆ ಕೆಮ್ಮಗಿರೆ ಮಹಾಪದ್ಮಂ ಭೇದಕ್ಕೆ ಪಡೆ ಸಂದುದೆಂಬುದನಱಿ[23]ದಂಜಿಯಾ[23]ರುಮಱಿಯದಂತಿ[24]ರೆ ಓ[24]ಡಿಕೆಟ್ಟಂ ಮತ್ತಿತ್ತ ಸುಬಂಧು ಪಿರಿದು ಬೇಗಂ ಕಾಳೆಗಮಂ ಕಾದಿ ಸೋಲ್ತೋಡಾತನಂ ಪಿಡಿದು ಕಟ್ಟಿ ಸಂ[25]ಕ್ರ[25]ಳಿಯನಿಕ್ಕಿ ಸೆಱೆಯೊಳಿಟ್ಟಂ

ಮತ್ತೆ ಚಾಣಾಕ್ಯಂ ಕಾಳೆಗಮಂ ಗೆಲ್ದುಂ ಪಾಟಲೀಪುತ್ರಮಂ ಪೊಕ್ಕು [26]ಮಹಾಪದ್ಮನರಸಿಯರ್ಕಳ್ಗಂ[26] ಭಂಡಾರಕ್ಕಂ ಕಾಪನಿಟ್ಟು ಪೊೞಲ ಪ್ರಜೆಯುಂ ಸಂತೈಸಿ [27]ಮತ್ತಂ[27] ಪ್ರಶಸ್ತ ದಿ[28]ನ ವಾರ ನಕ್ಷತ್ರ[28] ಮುಹೂರ್ತದೊಳ್ ಚಂದ್ರಭುಕ್ತಂಗೆ

---

1. ನನೆಂತು (ಫಚ), ನೆಂತು (ಚ). 2. ಡಂ ಓರ್ಬನ (ಕ), ಡಂ ಒರ್ಬನ (ಗ). 3. ರಿಯಾ (ಕಖಗ), ರೀ (ಫಚ), (ಚ)ದಲ್ಲಿ ತ್ರುಟಿತ. 4. ಪಂದೆ (ಕಖಗ). (ಚ)ದಲ್ಲಿ ತ್ರುಟಿತ. 5. ನಪ್ಪಾಯುಂ (ಫಚಛ). 6. ಕ್ಯ್ನಂ (ಕಖಗ). 7. + ತಾನುಂ (ಫಚ), (ಛ)ದಲ್ಲಿ ತ್ರುಟಿತ. 8. ನ (ಕಗ). 9. ನಾದೊನಂ (ಫಚಛ). 10. + ಡಿ (ಕಖಗ). 11. ಳಂ ತನಗೆ ಮಾಡುವುದು (ಕಖಗ). ಳ್ಗೆ (ಫಚಛ).* (ಚ) ಪ್ರತಿ ಇಲ್ಲಿಗೆ ನಿಂತಿದೆ ; ಮುಂದಿನ ಭಾಗ ನಷ್ಟ : ಅಸಮಗ್ರ. 12. ದಿಂ (ಫ), ದುಂ (ಛ). 13. ಕಾರ್ಯಂ (ಫಛ). 14. ದು (ಫಛ). 15. ದ್ದಿರ್ (ಕಖಗ), ಳ್ದಿಯು (ಫ) (ಛ)ದಲ್ಲಿ ತ್ರುಟಿತ. 16. ಳ್ಗಂ (ಫಛ). 17. (ಕ)ದಲ್ಲಿ ತ್ರುಟಿತ, ತನಗಾಗಿ (ಖ), ತನಗೆ (ಫಛ). 18. (ಕಛ)ಗಳಲ್ಲಿ ತ್ರುಟಿತ. 19. ದಂ (ಫಛ). 20. ಕ್ತನಗೊಂಡು (ಫಛ). 21 ರ್ಕಳೊ (ಫ), (ಛ)ದಲ್ಲಿ ತ್ರುಟಿತ. 22. ಲ್ ಪೇಳ್ದೊಡವರ್ (ಫಛ). 23. ದೊಜಿಯೊಳಾ (ಫಛ). 24. ರೆಮೊ (ಕಖ), ಯೊರ್ವನಂಯೋ (ಫ). (ಛ)ದಲ್ಲಿ ತ್ರುಟಿತ. 25. ಕೋ (ಖ). 26. (ಕಖಗ)ಗಳಲ್ಲಿಲ್ಲ. 27. (ಫಛ)ಗಳಲ್ಲಿಲ್ಲ. 28. ವಸ...(ಖ). ನಸವಾರ (ಫ), (ಛ)ದಲ್ಲಿ ತ್ರುಟಿತ.

ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ [1]ಮಹಾ[1]ಪದ್ಮಸರಸಿ ಚಂದ್ರಮತಿ ಮಹಾದೇವಿಯುಂ ಚಂದ್ರಭುಕ್ತಂಗೆ ಮಹಾದೇವಿಮಾಡಿ ಮತ್ತೆ ನಂದನ[2] ಭಂ*ಡಾರದೊಳಂ ತ[3]ಮ್ಮ[3] ಭಂಡಾರದೊಳಂ ದ್ರವ್ಯಮಿಲ್ಲದುದನಱಿದು ಪಾ[4]ಟಳೀಪುತ್ರದ[4] ಪ್ರಜೆಗಳಂ ನಾಡ ಪ್ರಜೆಗಳಂ ಬಱಿ[5]ಯು[5]ಟ್ಟಿ ಬರಿಸಿ[6]ಯು[6]ವರ್ಗೆಲ್ಲಮುಣಿಸಂ ಮಾಡಿ ಸೊರ್ಕಪ್ಪಾಹಾರಮನೂಡಿ [7]ನಿಮ್ಮ ನಿಮ್ಮ ದ್ರವ್ಯಂಗಳಿರ್ದೆಡೆಯುಂ ತೋಱಿಮೆಂದು[7] ಬೆಸಗೊಂಡೊಡವರ್ಗಳ್ ಸೊರ್ಕಿ ಮೆಯ್ಯಱಿಯದನಿಬರುಂ [8]ತಂ[8]ತಮ್ಮ ದ್ರವ್ಯದ[9]ಡೆಗಳಂ ತೋಱಿ[10] ಪೇೞ್ದು ಕೊಟ್ಟರಿಂತನೇಕ ಸಹಸ್ರಕೋಟಿ ದ್ರವ್ಯಮಂ ಚಾಣಾಕ್ಯಂ ಪಡೆದು ಚಂದ್ರಭುಕ್ತಂಗೆ [11]ತೋಱಿ[11] ಭಂಡಾರಮಂ ತೀವಿಯರಮನೆಯ ಮುಂದಣಂಗಣದೊ[12]ಳ್ ಇಂ[12]ತೆಂದು ಪೇೞ್ದಾಡಿದಂ ಪನ್ನೆರಡು ವರ್ಷ[13]ದಿಂದಂ[13] ನಂದನವಂಶಮಂ ನಿರ್ಮೂಲಂ[14] ಮಾಡಿ ಕಿಡಿಸುವೆನೆಂದೆನ್ನ ಪೂಣ್ದ ಪ್ರತಿಜ್ಞೆ[15]ನೆಱೆದತ್ತು ಮ[16]ತ್ತೆನಗೆ ಜಾದಿನೊಳೂಡಿದವೆ[16]ರಡು ವಸ್ತ್ರಮೊಳವು ಪೊನ್ನ ಗುಂಡಿಗೆ[17]ಯುಮುಂಟು ಮೂಱುದಂಡಮುಮೊಳವು[17] ಮಗಧೆನಾ[18]ಡ[18] ದ್ರವ್ಯಮೆಲ್ಲಮಂ ತಂದು ಭಂಡಾರಮಂ ತೀವಿದೆಂ ಗುಣವಿಶೇಷಮನಱಿವರಸನುಮೆನಗೆಬಸ[19]ಮಾದಂ[19] ಪೊಡೆಪಱಿಯುನೆಂದು ಪೆಱಿಯುಂಪ್ರೊ[20]ಯ್ಸ್[20]ಯೊಸೆದು ರಾಗಿಸಿ ತ್ರಿದಂಡಮನೆತ್ತಿ ಸೊರ್ಕಿದ ಪ್ರಜೆಮೆರಸು [21]ಲಟಹ[21]ದಿಂದಾಡಿದೊಂ ಮತ್ತಂ ಶ್ರೀಪರ್ವತದೊಳಿರ್ದ ತನ್ನ [22]ಪಾರ್ವಂ[22]ತಿ ಯಶೋಮತಿಗೆ ಬಱಿಯುಟ್ಟಿ ಬರಿಸಿಯಾಕೆಯೊಡನೆ ಭೋಗೋಪಭೋಗಂಗಳನನುಭವಿಸುತ್ತಂ ಸಾಮಂತ ಮಹಾಸಾಮಂತರ್ಕ[23]ಳ್ಗಂ ಜೀವಿತಂ[23]ಗೆಯ್ದು ತಳವರ್ಗ[24]ಮುಮಂ ಸಂತ[25]ವಿಸಿ[25] ಮಗಧವಿಷಯಮನಾಳುತ್ತಮಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತುಂ ಪಲಕಾಲಂ ಸಲೆ

ಮತ್ತಂ ಚಂದ್ರಮತಿ ಮಹಾದೇವಿಗೆ ಗರ್ಭಮಾಗಿಯೊಂದು ದಿವಸಂ ರಥಮನೇಱಿದೊಡಾ ರಥದ ಚ[26]ಕ್ರದ ಪತ್ತುಂ ಕೆ[ದಿರ್ಗ]ಳ್ ನೆಲದೊಳದುರ್[26]ದಂ ಚಾಣಾಕ್ಯಂ ಕಂಡೀ ಚಂದ್ರ[27]ಭುಕ್ತಂ[27] ಮೊದಲಾಗಿ ಪೃಥ್ವಿಯನೇಕಚ್ಛತ್ರಚ್ಛಾಯೆಯಿಂ ದಶಮಯೂರರ್ಕಳಾಳ್ದರೆಂದಾದೇಶಂಗೆಯ್ದಂ ಮತ್ತೆ ಕೆಲವು ದಿವಸದಿಂ ಚಂದ್ರಮತಿ ಮಹಾದೇವಿಗೆ ನವಮಾಸಂ[28]ನೆಱೆದೊಂ[28]ದುದಿವಸ ಮರಸಂನಂಜಿನೊಳ್ ಬೆರಸಿದಾಹಾರಮನುಣ್ಬಾಗಳ್ ಪಕ್ಕದಿರ್ದರಸಿಗೆ ಅರಸನೊಡನು[29]ಣ್ಬ[29] ಬಯಕೆ

---

1. (ಫಭ)ಗಳಲ್ಲಿಲ್ಲ. 2. + ಸ (ಕಖಗ). *(ಭ) ಪ್ರತಿ ಇಲ್ಲಿಗೆ ನಿಂತುಹೋಗಿದೆ (ಓಲೆ ೧೮೦) ; ಅಸಮಗ್ರ. 3. ನ್ನ (ಫ). 4. ಳಿಪ (ಫ). 5. + ನ (ಫ). 6. ಮ (ಕಖಗ). ಪೇಳಿಪೇಳಿಂ ನಿಮ್ಮ ದ್ರವ್ಯಗಳನೆಂದು (ಫ). 8. (ಕಗ)ಗಳಲ್ಲಿಲ್ಲ. 9. + ಲ್ಲೆ (ಕಗ). 10. + ಯುಂ (ಫ). 11. (ಫ)ದಲ್ಲಿಲ್ಲ. 12. ಳಿರ್ದಿಂ (ಫ). 13. ದಂದಿಂಗೆ (ಫ). 14. + ನ (ಕಖಗ). 15. + ಯುಂ (ಖ). 16. ತ್ತಮೆನೆಗೆ ವಾದಿನೊಳ್ಳ್ಮಡಿದೆ (ಫ). 17. ಯುಂ ಮೂಱು ದಂಡಮುಮುಟು (ಫ). 18. ಡೊಳುಳ್ಳ (ಫ). 19. ದನೊಸೆದನೊಳಂ (ಫ). 20. ಡೆಯಿಸಿ (ಫ). 21. ಲ್ಲಹ (ಫ). 22. ಪಂಡ (ಫ). 23. ಳ್ಜಟಿಸಂ (ಕಗ). 24. + ಳ (ಫ). 25. ಯ್ಸ (ಫ). 26...ಕದ್ದಿರ್ಗಳ್...(ಕಖಗ), ಕ್ರಂ ಪತ್ತುಂ ಕಡಿಯಾಗಿ ನೆಲನೊಳ್ ಬಿರ್ದೊಡ (ಫ). 27. ಗುಪ್ತಂ (ಖ). 28. ತೀವಿದೊಂ (ಕಗ). 29. ಣಲ್ (ಖ).

ಪಾಪಮೊಪ್ಪೆ ಬಾಳಂಕಿಟ್ಟು ಇಱ[1]ರ್ದ ಪಕ್ಕದಿರ್ದ[1] ಚಾಣಾ[2]ಕ್ಯನ[2] ದೃಷ್ಟಿ[3]ಯಂ ಬಂಚಿ[3]ಸಿ ಪ್ರಚ್ಛನ್ನದಿಂದಂ ತನ್ನ ಕೆಯ್ಯ ತುತ್ತನರಸಂ ವಿಷಮಿಶ್ರಮೆಂದಱಿಯದೆ ಕೊಟ್ಟನದ[4]ನಾ[4]ಕೆ ಬಾಯೊಳಿಟ್ಟಾಗ[5]ಳೆ[5] ಚಾಣಾಕ್ಯಂ ಕಂಡು ತಲೆಯಂ[6]ಪೊ[6]ಗಱಿದು ಬಸಿಱಂ ಪೋೞ್ದು ಕೂಸಂ ಪೊಱಮಡಿ[7]ಸುವು[7]ದಂ ಕಂ[8]ಡು ಹಾ [9]ಅಯ್ಯೋ[9] ಎನ್ನ ಚಂದ್ರಮತಿ ಮಹಾದೇವಿ ಎನ್ನ ನಲ್ಲಳೆಯೆಂದು ಪ್ರಳಾಪಂಗೆಯ್ದು ದುಃಖಾಕ್ರಾಂತನಾಗಿ ತದ್ವಿಯೋಗದಿಂ ಚಂದ್ರಗುಪ್ತಂ ಪ್ರಾಣ ಪರಿತ್ಯಾಗಂಗೆಯ್ದು ಮತ್ತಾ ಕೂಸಿನ ತಲೆಯೊಳಗಿನಿಸಾನುಂ ವಿಷ[10]ಬಿಂದು ಪನಿತುಂದಱಿಂದಾತಂಗೆ ಬಿಂದು ಸಾ[11]ಗ[11]ರನೆಂ[12]ದು ಪೆಸರನಿಟ್ಟು ಪಟ್ಟಂಗಟ್ಟಿ ಕೂಸಂ ತೋಱಿಯರಸುಗೆಯ್ಯುತ್ತಂ ಕಾಲಂ ಸಲೆ

ಮತ್ತೆ ಬಿಂದುಸಾಗರಂ ನವಯೌವನನಾದಂದು ಚಾಣಾಕ್ಯಂಗೆ ಸಂಸಾರ ಶರೀರ[13]ಭೋಗಂಗಳೊಳಾದಂ[13] ವೈರಾಗ್ಯಮಾಗಿ ತಪಂಬಡುವ ಬಗೆಯಾಗಿ ಸಂಬಂಧುವಂ ಸೆಱೆಯಿಂ[14] ಬಿಡಿಸಿ [15]ವರಿಸಿ[15] ಕ್ಷಮೆ[16]ಗೊಳಿಸಿ[16] ಸನ್ಮಾನದಾನಾದಿಗಳಿಂದಾತನಂ ಪೂಜಿಸಿ ಬಿಂದುಸಾಗರಂಗೆ ಮಂತ್ರಿಮಾಡಿಯರಸನಂ ಬೆ[17]ಸಂ[17]ಗೊಂಡೊಡಂಬಡಿಸಿಯೆಲ್ಲರುಮಂ ಕ್ಷಮೆಗೊಳಿಸಿ ಬಾಹ್ಯಾಭ್ಯಂತರ ಪರಿಗ್ರಹಂಗ[18]ಳಂ[18] ತೊಱೆದು ಮತಿವರರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗ[19]ಮಮೆ[19]ಲ್ಲಮಂ ಕಲ್ತಾಚಾರ್ಯರಾಗಿ ಪ[20]ಲಂಬ[20]ರ್ ಶಿಷ್ಯರ್ಕಳಂ ಮಾಡಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪಲಕಾ[21]ಲಮುಗ್ರೋಗ್ರತಪಶ್ಚರಣಂ[21]ಗೆಯ್ದು ಮತ್ತೆ ಪಾಟಲೀಪುತ್ರದ[22]ಸಾರೆ ಸೋ[22]ಣೆಯೆಂಬ ತೊಱೆಯ[23] ತಡಿಯ ತುಱುಪಟ್ಟಿ[24]ಯೊಳ್ ವಿಹಾರಿಸುತ್ತಂ[24] ಬಂದಿ[25]ರ್ದರಾ[25] ಬರವಂ ಸುಬಂಧು ಕೇಳ್ದು ಮಹಾಪದ್ಮನ ರಾಜ್ಯಮಂ ಕೊಂಡುದುಮಂ ತನ್ನಂ [26]ಸಂಕಲೆಯೊಳಿಟ್ಟು ಸೆಱೆಗೆಯ್ದು[26] ಪಲಕಾಲಂ ನಮೆಯಿಸಿದ ಪಗೆಯುಮಂ ನೆನೆದು ಸಂಜೆವೊ[27]ೞ್ತಾ[27]ದಾಗಳ್ ಬಂದಿಸುವ ನೆವದಿಂದಂ ಪಿರಿದುಮರ್ಚನೆಯುಂ ಕೊಂಡು ಪೋಗಿ ಚಾಣಾಕ್ಯರುಷಿಯರ್ ಮೊದಲಾಗೊಡೆಯ ರುಷಿಯರ್ಕಳನರ್ಚಿಸಿ ಗುರುಪರಿ[28]ಪ[28]ಡಿಯಿಂದಂ ಬಂದಿಸಿ ಪಿರಿದುಬೇಗಂ ಚಾಣಾಕ್ಯರಿಸಿಯೊಡನೆ [29]ಗೋಷ್ಠಿಯಿ[29]ರ್ದು ಪೋಪಾಗಳ್ ತನ್ನವರ್ಗ್ಗದಿಂದಂ ಮಾಗಿಯ ದಿವ[30]ಸಂ[30] ರಿಸಿಯರ್ಕಳ್ [31]ಸೀತದೊಳ್ ಸಡೆಗುಂ[31] ಸೇದೆಗೆಡುವರದಱಿಂ ಬಳಸಿಯುಂ ಪಿರಿದುಂ ಗೊಬ್ಬರಮು-

1. ರ್ದ (ಫ). 2. ಕ್ಯಂ (ಕಖಗ). ಕ್ಯನಂ (ಫ). 3. ಯಿಂದಂಚಿ (ಕಖಗ). 4. ನಂತಾ (ಫ). 5. ಡೆ (ಖ), ಳ್ (ಫ). 6. ಪಾ (ಕಖಗ). 7. ಸಿದು (ಫ). 8. ಡರಸಂ (ಫ). 9. (ಫ)ದಲ್ಲಿಲ್ಲ. 10. + ದಿ (ಫ). 11. ದಲ್ಲಿಲ್ಲ: ಮುಂದಕ್ಕೂ ಈ ಪ್ರತಿಯಲ್ಲಿ ಹೀಗೆಯೇ. 13. ದೊಳಪ್ಪ (ಫ). 12. ದುಂ (ಫ). 14. + ದಂ (ಖಫ). 15. ವರಿಸಿ (ಖ), (ಫ)ದಲ್ಲಿಲ್ಲ. 16 ಗೊಂಡು (ಫ). 17. ಸ (ಫ). 18. ಳೆಲ್ಲಮಂ (ಫ). 19. ಮಂಗಳೆ (ಫ). 20. ಲ (ಫ). 21. ಲಂತಪಂ (ಫ). 22. ಸಮೀಪದ ಶೋ (ಫ). 23. + ತಂಪಿನ (ಫ). 24. ಗೆ (ಫ). 25. ರ್ದಡಮರ (ಫ). 26. ಸೆಱೆಯೊಳಿಕ್ಕಿ ಸೆಱೆಯೊಳ್ (ಫ). 27. ತ್ತಾ (ಕಗ), ತರ್ (ಖ), 28. ಪ (ಖಫ). 29. ಗೊಷ್ಠಿಯೊಳಿ (ಫ). 30. ಸದಿಂ (ಫ). 31. ಸೀತದೊಳ್ (ಖ), (ಫ)ದಲ್ಲಿಲ್ಲ.

ನೊಟ್ಟಿ[1]ಪೆಂದು[1] ಪಕ್ಕದಿದೊರ್ಟ್ಟಿಸಿ ಬಳಸಿಯುಂ ಕಿಚ್ಚಂತಗು[2]ಳ್ಚಲ್ವೇಚ್ಚು[2] ಪ್ರೋಚಿಲ್ಗೆ ಪೋದಂ

ಮತ್ತೆ ಗೊಬ್ಬರದ ಕಿಚ್ಚು ಬಳಸಿಯುಂ ತಮ್ಮಂ ಸುಡೆ ಚಾಣಾಕ್ಯ ಋಷಿಯರ್ ಮೊದಲಾಗೊಡೆಯ ರಿಸಿಯರ್ಕಳೆಲ್ಲಂ

ಗಾಹೆ ॥ ಛಿಜ್ಜಉ ಭಿಜ್ಜವು ಜಾಉ ಖಉ ಜೋ ಇಯ ಏಹು ಸರೀರು ।
ಅಪ್ಪಾ ಭಾವಹಿ ಣಿಮ್ಮಲಉ ಜೇಂ ಪಾವಹಿ ಭವ ತೀರು ॥
ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝಣ ಕೇಣಚಿ ॥

ಎಂದಿಂತು ಕ್ಷಮೆಯುಂ ಭಾವಿಸಿ[3] ಚತುರ್ವಿಧಮಪ್ಪಾಹಾರ [4]ಶರೀರ[4]ಮುಮಂ ತೋಱಿ[5]ದಿಂ[5]ಗಿ[5]ಣೀ ಮರಣದಿಂ ಶುಭಪರಿಣಾಮದೊಳ್ [6]ಕೂಡಿ ಮಿಕ್ಕ ರತ್ನತ್ರಯಮನಾರಾಧಿಸಿ[6] ಸನತ್ಕುಮಾರ ಕಲ್ಪದೊಳ್ ಸರ್ವಾರ್ಥವೆಂಬ ವಿಮಾನದೊಳ್[7] ಚಾಣಾಕ್ಯ ರಿಸಿಯರ್ ಪುಟ್ಟಿದರ್ ಮತ್ತುಳಿದ ಋಷಿಯರ್ಕಳೆಲ್ಲಂ ಸೌಧರ್ಮಕಲ್ಪಂ ಮೊದಲಾಗೊಡೆಯ ಕಲ್ಪಂಗಳೊಳ್ ಪುಟ್ಟಿದರ್

ಮತ್ತೆ ಪೆಱರುಂ ಸಂನ್ಯಸನಂ ಗೆಯ್ದಿರ್ದ ಕ್ಷಪ[8]ಣ[8]ಕರುಂ ಚಾಣಾಕ್ಯರಿಸಿಯರಂ ಮನದೊಳ್ ಬಗೆದು ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಳ್ಕೆ ಮೊದಲಾಗೊಡೆಯ [9]ಇಪ್ಪತ್ತೆರಡು[9] ಪರೀಷಹಂಗ[10]ಳಂ[10] ವ್ಯಾಧಿಗಳೊಳಪ್ಪ ವೇದನೆಗ[10]ಳುಮಂ[10] ಸೈರಿಸಿ ಶುಭ ಪರಿಣಾಮದಿಂ [11]ಮಿಕ್ಕ ದರ್ಶನಜ್ಞಾನಚಾರಿತ್ರಂಗಳನಾರಾ[11]ಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

1. ಯುಂ ಪಂದು (ಕಗ). ಯುಂ (ಖ). 2. ಳ್ಚಿಪೆಂದು (ಘ). 3. +ಸಮ್ಯಗ್ದರ್ಶನ ಜ್ಞಾನಚಾರಿತ್ರಂಗಳಂ ಸಾದಿಸಿ (ಘ). 4. (ಘ)ದಲ್ಲಿಲ್ಲ. 5. ದಿ (ಘ). 6. ಮುಡಿಪಿ (ಘ). 7. +ಸಪ್ತಸಾಗರೋಪಮಾಯುಷ್ಯ ಸ್ಥಿತಿಯನೊಡೆಯನಾಗಿ (ಘ). 8. (ಖಘ)ಗಳಲ್ಲಿಲ್ಲ. 9. ದ್ವಾವಿಂಶತಿ (ಘ). 10. ಕ್ಕಂ (ಘ). 11. ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ (ಸಾ) (ಘ).

## (೧೯) ವೃಷಭಸೇನರೆಂಬ ರಿಸಿಯರ ಕಥೆ

ವೃಷಭಸೇನರೆಂಬ ರಿಸಿಯರ ಕಥೆಯಂ ಪೇೞ್ವೆಂ :

ಗಾಹೆ ॥ ವಸಈಏ ಪಳಿದಾಏ ವಿಟ್ಠಾಮಚ್ಚೇಣ ಉಸಹಸೇಣೋವಿ ।
ಆರಾಧಣಂ ಪವಣ್ಣೋ ಸಂಘ ಪರಿಸಾಏ ಕುಣಾಳಹ್ಮಿ ॥

[ವಸಈಏ—ಬಸದಿ, ಪಳದಾಏ—ಉ[1]ರಿ[1]ಪೆಪಟ್ಟುದಾದೊಡೆ, ವಿಟ್ಠಾಮಚ್ಚೇಣ—ವಿಷ್ಟಮ[2]ತ್ಸ್ಯ[2]ನಿಂದಂ, ಉಸಹಸೇಣೋವಿ—ವೃಷಭಸೇನಾಚಾರ್ಯರ್, ಆರಾಧಣಂ—[3]ಮಿಕ್ಕ[3] ದರ್ಶನಜ್ಞಾನಚಾರಿತ್ರಂಗಳಾರಾಧನೆಯಂ, ಪವಣ್ಣೋ—ಪೊ[4]ರ್ದಿ[4]ದೊಂ, ಸಂಘ ಪರಿಸಾಏ—ತಮ್ಮ ರಿಸಿಸಮುದಾಯಂಬೆರಸು, ಕುಣಾಳಹ್ಮಿ—ಕುಣಾಳಮೆಂಬ ಪೊೞಲೊಳ್]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ದಕ್ಷಿಣಾ ಪಥದೊಳ್ ಕರ[5]ಹಟ[5]ಮೆಂಬುದು ನಾಡಲ್ಲಿ ಕುಣಾಳಮೆಂಬ ಪೊೞಲದನಾಳ್ವೊಂ ಧನದನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳ್ ಮಂತ್ರಿ ವಿಷ್ಟಮತ್ಸ್ಯನೆಂಬೊಂ[6] ಪಿರಿಯ ಪಂಡಿತ ನಂತವರ್ಗಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ

ಮತ್ತೊಂದು ದಿವಸಂ ವೃಷಭಸೇನರೆಂಬಾಚಾರ್ಯರ್ ಪಿರಿದು ರಿಸಿಸಮುದಾಯಂಬೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತ[7]ಮಾ[7] ಪೊೞ[8]ಲ್ಗೆ[8] ಬಂದೊಂದು [9]ಬಸದಿಯೊ[9]ಳಿರ್ದರವರ ಬರವನರಸನುಂ ಪೊೞಲ*ವರುಂ ಕೇಳ್ದು ಪಿರಿದುಂ ಪೂಜೆಯಂ ಕೊಂಡುಪೋಗಿಯರ್ಚಿಸಿ ಪೂಜಿಸಿ ಪೊಡೆವಡುವುದಂ ವಿಷ್ಟಮತ್ಸ್ಯಂ ಕಂಡು ಸೈರಿಸಲಾಱದೆ ಮಾತ್ಸರ್ಯದಿಂದಂ ತನ್ನ ಪಾಂಡಿತ್ಯದ ಗರ್ವದಿಂದಂ ವೃಷಭಸೇನಾಚಾರ್ಯರೊಡನೆ ವಾದುಗೆಯ್ದು ನೆರವಿಯೊಳ್ ಸೋಲ್ತುಸಿಗ್ಗಾಗಿ ಪೋಗಿ ನಟ್ಟನಡುವಿರುಳ್ ಬಂದು* ಕಿಚ್ಚಂ ತಗುಳ್ಚಿ ಪೋದಂ ಮತ್ತಂ ವೃಷಭಸೇನಾಚಾರ್ಯರ್ ಮೊದಲಾಗೊಡೆಯ ರಿಸಿಯರ್ಕಳ್ [10]ಕ್ಷಮೆಯಂ ಭಾವಿಸಿ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು ಶುಭ ಪರಿಣಾಮದಿಂದ[11]ಂ ಮಿಕ್ಕ ರತ್ನತ್ರಯಂಗಳಂ ಸಾಧಿಸಿ[11] ಮುಡಿಪಿಯಲ್ಲಿ ವೃಷಭಸೇನಾ

1. ರು (ಕಗ). 2. ತ್ಸರನೆಂಬೊ (ಘ). 3. ಸಮ್ಯಗ್ (ಘ). 4. ೞ್ದಿ (ಕಖಗ). 5. ಹಡ (ಖ), ಹಾಟ (ಘ). 6. + ಪಿರಿ (ಖ). 7. ಮಂತಾ (ಘ). 8, ಲೊಳಗೆ (ಘ). 9. ಪುರದೊ (ಕ). ಮಠದೊ (ಖಗ). 'ಮಠದೊ' ಎಂದಿರಬಹುದೆ ? *-* (ಘ)ದಲ್ಲಿ ತ್ರುಟಿತ. 10. + ಸಮ್ಯಗ್‌ದರ್ಶನ ಚಾರಿತ್ರಂಗಳಂ ಸಾಧಿಸಿ (ಘ). 11. (ಘ)ದಲ್ಲಿಲ್ಲ.

"ಚಂಡಕೌಶಿಕ" ನಾಟಕದಲ್ಲಿ ಬರುತ್ತದೆ; ೧೮. ತಸ್ಕರಶಾಸ್ತ್ರಂಗಳೊಳ್—ಚೋರ ಶಾಸ್ತ್ರಗಳಲ್ಲಿ ಎಂದರೆ ಕಳ್ಳತನವನ್ನು ಉಪದೇಶಿಸುವ ಶಾಸ್ತ್ರಗಳಲ್ಲಿ ಕುಶಲಂ—ನಿಪುಣನು; ಕಸವರಂಗಳಂ—ದ್ರವ್ಯಗಳನ್ನು; ೧೯. ನಾಡೆಯಂತರದೊಳ್—ಬಹುದೂರದಲ್ಲಿ; ೨೧. ಪಾೞ್ದೇಗುಲದೊಳ್—ಹಾಳು ದೇವಾಲಯದಲ್ಲಿ; ೨೨. ಎಚ್ಚಿ—ಬಳಿದುಕೊಂಡು, "ಎಚ್ಚು—ಅಂಜನಕ್ರಿಯಾಯಾಂ" ೨೩. ಮೂಗೊಳಗರ್ದು—ಮೂಗು ಒಳಕ್ಕೆ ಕುಸಿದ; ನೊಳವುಗಳ್—ನೊಣಗಳು; ೨೪. ತಿನೆ—ಕಡಿಯಲು; ಪೇಸಿದನಾಗಿ—ಜುಗುಪ್ಸಿತನಾಗಿ ೨೫. ತೊನ್ನುಗೊಂಡಿರ್ಪುದಂ—ತೊನ್ನು ಬಂದಿರುವುದನ್ನು; ಅಱಿಪುತ್ತಂ—ತಿಳಿಸುತ್ತ.

**೧೬೭.** ೧: ಪುಟ್ಟಿಗೆಯನ್ನುಟ್ಟು—ವಸ್ತ್ರವನ್ನುಟ್ಟು. "ಧರಣಿಜಯಮೆಂಬ ಪುರದೊಳ್ ಪರದಂ ಕಡುಲೋಭಿಯೊಂದೆ. ಪುಟ್ಟಿಗೆಯುಟ್ಟಿರ್ದಿರುಳುಂ ಪಗಲುಂ ತನ್ನಯ ಕರಮನೆ ಪೊವೆದಿರ್ದ ನೈಕಿಲೊಳ್ ಬಿಸಿಲೆಡೆಯೊಳ್" ಎಂದು ಬಂಧುವರ್ಮನ ಪ್ರಯೋಗವೂ (ಜೀವಸಂ. ೮-೬೦), "ಪಟ್ಟಸೂತ್ರದ ಚಿತ್ರಸೂತ್ರದ, ನೇತ್ರವಟ್ಟಗೆಯ ಪುಟ್ಟಿಗೆಗಳನೊಟ್ಟಿ ಬೆಟ್ಟಾಗಿ ಪುಂಜಿಸಿ" ಎಂದು ಶಾಂತಿನಾಥನ ಪ್ರಯೋಗವೂ (ಸುಕುಮಾ. ೧೧-೯೧ ವ) ಇವೆ; ಪೂಸಿ—ಬಳಿದು, ಲೇಪಿಸಿ; ೨. ತಂಬುಲಂದಿನುತ್ತುಂ—ತಾಂಬೂಲವನ್ನು ಅಗಿಯುತ್ತ; ೩. ಅಗ್ಗಳದ—ಶ್ರೇಷ್ಠರಾದ; ಒತ್ತೆಯನಿಟ್ಟು—ಮುಂಗಡವಾಗಿ ದ್ರವ್ಯಾದಿಗಳನ್ನು ಕೊಟ್ಟು; ೪. ಬಚ್ಚರ—ವೈಶ್ಯರ; ದೂಸಿಗರ—ಬಟ್ಟೆ ವ್ಯಾಪಾರಿಗಳ, ದೂಸ> (ಸಂ) ದೂಷ್ಯ + ಇಗ, ದಷ್ಯ ಎಂದರೆ ವಸ್ತ್ರ, ಬಟ್ಟೆ; ನಿಯೋಗಿಗಳ—ಅಧಿಕಾರಿಗಳ ೫. ಅಗ್ಗಳಮಪ್ಪ—ಶ್ರೇಷ್ಠರಾದ, ಇದರ ಪಾಠಾಂತರ ಅಗ್ಗಯಿಱಿಯರಪ್ಪ ಎಂಬುದು ಸ್ವೀಕರಯೋಗ್ಯ, ಅರ್ಘ—ಹೆಚ್ಚು ಹಣವನ್ನು ತೆಗೆದುಕೊಳ್ಳುವವರಾದ; ೮. ಏೞನೆಯ ನೆಲೆಯೊಳ್—ಏಳನೆಯ ಅಂತಸ್ತಿನಲ್ಲಿ; ಉಂದುವೋವರಿಗೆಯ—ಮಲಗುವ ಮನೆಯ ಕೊಠಡಿಯ, ಓವರಿಗೆ< ಸಂ. ಅಪವರಕಾ: ಪುಡಿಕೆಯೊಳ್—ಪೆಟ್ಟಿಗೆಯಲ್ಲಿ; ೧೧. ಮಱಲುಂದು ವೋವರಿಯಂ—ಪ್ರೈಮರೆತು ನಿದ್ರಿಸುವ ಕೊಠಡಿಯಲ್ಲಿ; ೧೨. ತಲೆದೆಸೆಯೊಳ್—ತಲೆಯ ಕಡೆಯಲ್ಲಿ; ಪುಡಿಕೆಯಂ—ಪೆಟ್ಟಿಗೆಯನ್ನು, ಭರಣಿಯನ್ನು; (ಸಂ) ಪುಟಿಕಾ; ೧೫. ನೇಸರ್ಮೂಡೆ—ಸೂರ್ಯನು ಉದಯವಾಗಲು; ೧೭. ಪರದರ—ವರ್ತಕರ: ೧೮. ಆರಯ್ಯದೆ—ವಿಚಾರಿಸದೆ ಹುಡುಕದೆ; ಕೆಮ್ಮಗಿರ್ಪ—ಸುಮ್ಮನಿರುವ; ೧೯. ಸೆಜ್ಜೆಯೋವರಿಯಂ—ಮಲಗುವ ಕೋಣೆಯನ್ನು; ೨೧. ನಿಗ್ರಹಮಂ—ಶಿಕ್ಷೆಯನ್ನು, ದಂಡನೆಯನ್ನು; ೨೨. ಎಡೆಯನೀವುದು—ಅವಕಾಶವನ್ನು ಕೊಡುವುದು: ೨೩. ಮೆಚ್ಚುಕೆಯ್ವುದು—ಮೆಚ್ಚುವಹಾಗೆ ಮಾಡುವುದು; ೨೫. ಆರಮೆಗಳೊಳಂ—ಉದ್ಯಾನವನಗಳಲ್ಲಿಯೂ; ೨೮. "ಪಿರಿದೊಂದು ಕಱುವಳ್ಳಮಂ"—ಈ ಪಾಠ ಸರಿಯಲ್ಲ, 'ಳ [ಳಿ]ಱುವಳ್ಳಮಂ' ಎಂದಿರಬೇಕು, ಅಳಿಱು ಎಂದರೆ ಕೆಸರು, ಕೆಸರಿನ ದೊಡ್ಡ ಹಳ್ಳವನ್ನು ಎಂದರ್ಥವಾಗುತ್ತದೆ.

**೧೬೮.** ೧. ವಿದ್ಯಾಧರ ಕರಣದಿಂ—ವಿದ್ಯಾಧರರೆಂಬ ಆಕಾಶಗಾಮಿಗಳ ವಿದ್ಯೆಯಿಂದ; ಲಂಘಿಸಿ—ಹಾರಿ, ದಾಟಿ; ಗೆಂಟಱೊಳಿರ್ದು—ದೂರದಲ್ಲಿದ್ದು; ೨. ಪುಯ್ಯಲಿಡೆಯುಡೆ—ಕೂಗಿಕೊಳ್ಳುತ್ತಿರಲು; ೫. ಕಳ್ಳನಲ್ಲದುದರ್ಕೆ ಪೊೞಲೆಲ್ಲಮಱಿಗುಂ—ಇಲ್ಲಿ ದ್ವಿತೀಯಾರ್ಥದಲ್ಲಿ ಚತುರ್ಥಿ; ೯. ರೂಪುಗರೆದು—ರೂಪವನ್ನು ಮರೆಸಿ, ಮುಚ್ಚಿಕೊಂಡು; ದಿವಸಕ್ಕೆ—ಹಗಲಿಗೆ; ೧೦. ಪ್ರತ್ಯಯಮಂ ಮಾಡಿ—ನಂಬಿಕೆಯನ್ನುಂಟುಮಾಡಿ; ೧೧. ಪ್ರತಿಘಟಕಾಂಜನಂಗಳಂ—ವಿರುದ್ಧವಾದ ಗುಳಿಗೆ ಕಾಡಿಗೆಗಳನ್ನು: ೧೨. ಕುಹಕಂ—ಮೋಸಗಾರ; ೨೧. ನೀಡುಂ—ಬಹಳ ಹೊತ್ತು; ೨೨. ಬಾೞೆ ವಾೞೆ—ಬದುಕಿರಲು ಎಂದರೆ ಪ್ರಾಣವಿರುತ್ತಿರಲು; ಅವಯವದೆ—ಸುಲಭವಾಗಿ, ಶ್ರಮವಿಲ್ಲದೆ; ೨೪. ಒಱಲು—ಕೂಗಲು; ೨೭. ಅಮೋಘಂ—ವ್ಯರ್ಥವಲ್ಲದೆ, ನಿಶ್ಚಯವಾಗಿಯೂ; ೨೯. ದರ್ಕ್ಕಂ ಬಸಿದು—ಶೂಲದ ಮೊನೆಯನ್ನು ಹರಿತಮಾಡಿ; ೩೦. ರೂಪ ಪರಾವರ್ತನಂಗೆಯ್ದು—ಆಕಾರವನ್ನು ಮಾರ್ಪಡಿಸಿಕೊಂಡು, ರೂಪ ಪರಾವರ್ತನ ಎಂಬುದೊಂದು ವಿದ್ಯೆ. "ರೂಪ ಪರಾವರ್ತನ ವಿದ್ಯೆಯಿಂ ತುರಗ ರೂಪಾದಂ ಚರಂ ಖೇಚರಂ" ಎಂದು ನಾಗಚಂದ್ರನ ಪ್ರಯೋಗ (ಪಂಪರಾ. ೪-೧೦೫).

ಬಿಳನಂ—ಪಾಪಿಯನ್ನು. ದುಷ್ಟನನ್ನು. ಪಿಡಿದು—ಹಿಡಿದು. ಉಡಿಯೆ—ಮುರಿಯುವಂತೆ, ಕಟ್ಟಿ. ಬಿಡವಿಡ ಬಿಡುಕುವಿನಂ—ಅಲುಗಲುಗಿ ಅಲುಗಲುಗುತ್ತಿರಲು. ವಿಲಿವಿಲಿ ಒದ್ದಾಡುತ್ತಿರಲು, ಪೆಡತಲೆಯಿಂ—ತಲೆಯ ಹಿಂಭಾಗವನ್ನು, ಬಡಿಯೊಳ್—ದೊಣ್ಣೆಯಲ್ಲಿ, ಒಡೆಯೆ—ಒಡೆಯುವಂತೆ, ಪೊಡೆ—ಹೊಡೆ.

೩೫. ಕೊಲ್—ಕೊಲ್ಲು, ಕಟ್ಟು, ಇಱಿ. ಮುಱಿ—ಮುರಿ, ಕಡಿ—ಕತ್ತರಿಸು, ನಡುವಂ—ಸೊಂಟವನ್ನು, ಕೊಱೆ—ಕತ್ತರಿಸು. ಕುತ್ತು—ಚುಚ್ಚು, ಕರುಳ್ಗಳಂ—ಕರುಳುಗಳನ್ನು, ತೆಗೆ—ಹೊರಕ್ಕೆ ಹಾಕು, ಮೊಗವಂ—ಮುಖವನ್ನು, ಸುಡು. ಪಿಡಿ—ಹಿಡಿ. ಬಡಿ, ನಿಮಿರ್ದು—ನೇರವಾಗಿ. ಇಱ್—ಇರಿ, ಬಯ್—ಬೈಯು ; ಕಡಂಗಿ—ಉತ್ಸಾಹಿಸಿ. ಸುಂಗು. ಎಂದು—ಎಂಬುದಾಗಿ. ನಾರಕರಾಗಳ್—ನರಕದವರು ಆಗ, ಮುಸುಱಿ—ಮುತ್ತಿಕೊಂಡು,

೧೩. ಕೊಂತಂಗಳಿಂದಂ—ಒನಕೆಗಳಿಂದ. ಇಟ್ಟಿಗೆಗಳಿಂದಂ—ಈಟಿಗಳಿಂದ, ಕುತ್ತಿಸಿಱಿಂದಂ ; ಕುತ್ತುವ—ಚುಚ್ಚುವ, ಇಸಿಱಿಂದಂ—ಆನೆ ಹಂದಿಗಳ ಕೋಡುಗಳಿಂದ, (ತಮಿಳು) ಎಯಿಱು ; ಕರುಳ್ಮಾಲೆಗಳ್—ಕರುಳಿನ ತೆಕ್ಕೆಗಳು ; ೧೪. ಮುಟ್ಟಿಗೆಗಳೊಳ್—ಮುಟ್ಟಿಗೆಯೆಂಬ ಆಯುಧದಲ್ಲಿ. ಇಟ್ಟು—ಹೊಡೆದು, ತೆಗಪ್ಪುವುದುಂ—ಎಳೆಯುವುದೂ : ೧೫. ಪೊಟ್ಟುವಂತೆ—ಹೋಳು ಮಾಡುವಂತೆ : ೧೬. ಬಾಟ್ಟುದುಂ—ಪೋಟ್ಟುದುಂ (?) ; ೧೭. ಉಸಿರ್ವತ್ತಿಲ್ಲದೆ—ಉಸಿರಾಡಲು ಅವಕಾಶವಿಲ್ಲದೆ (?) ; ೨೫. ಪೇೞೆಪಟ್ಟ—ಹೇಳಲ್ಪಟ್ಟ.

**೧೬೨.** ೪ : ನಿನಗೊಸೆದೆಂ—ನಿನಗೆ ಪ್ರಸನ್ನನಾದೆನು ; ೧೩. ತೋಱಿಯಾ ತಡಿಯೊಳ್, ಇಲ್ಲಿ ಪದ್ಯ ದೀರ್ಘವಿದೆ : ೧೬. ಮಗನೆನಾಂ—ಮಗನಾಗಿದ್ದೇನೆ ನಾನು : ೧೮. ಇರ್ವೆಮುಂ—ಇಬ್ಬರಾದ ನಾವೂ ; ಸಮಾನವಯಸರೆಂ—ಸಮಾನ ವಯಸ್ಸಿನವರಾಗಿದ್ದೇವೆ : ೨೫. ಸುರಖಿಮೆಂಬೋದಂ—ಸುರಖಿ ಎಂಬ ಶಾಸ್ತ್ರವನ್ನು, ಇದು ಕಳ್ಳತನವನ್ನು ಪತ್ತೆಹಚ್ಚುವುದನ್ನು ಪ್ರತಿಪಾದಿಸುವ ಶಾಸ್ತ್ರ : ಕರಪಟಶಾಸ್ತ್ರ—ಚೋರಶಾಸ್ತ್ರ, ಕಳ್ಳತನವನ್ನು ಕಲಿಸಿಕೊಡುವ ಶಾಸ್ತ್ರ. ಇದನ್ನು ಬರೆದವನು ಖರಪಟನು ; ಅವನ ಹೆಸರಿನಿಂದ ಈ ಶಾಸ್ತ್ರಕ್ಕೆ ಹೆಸರು ಬಂದಿದೆ. ಕೌಟಲೀಯ ಅರ್ಥಶಾಸ್ತ್ರದಲ್ಲಿ 'ತಸ್ಯೋಪಕರಣಂ ಪ್ರಮಾಣಂ ಪ್ರಹರಣಂ ಪ್ರಧಾರಣಮವಧಾರಣಂ ಚ ಖರಪಟ್ಟಾದಾಗಮಯೇತ್' ಎಂದಿದೆ (೪–೮). ಇದಕ್ಕೆ ಟಿಪ್ಪಣಿ "ಖರಪಟ್ಟ ಇತಿ ನಾಮ್ನಾ ಪ್ರಸಿದ್ಧಾತ್ ಚೋರಶಾಸ್ತ್ರಾತ್", ಅರ್ಥಶಾಸ್ತ್ರದ ಮೇಲಿನ 'ಪ್ರತಿಪದಸಂಚಿಕಾ' ಎಂಬ ಮಲಯಾಳಿ ಟೀಕೆಯಲ್ಲಿ "ಇತ್ತೊನ್ನ ಉಪಕರಣಾದಿಗಳೆಲ್ಲಂ ಕರಪಟತ್ತಿನ್ರಂಕ" ಎಂಬ ವಿವರಣೆ ಇದೆ. ಇದನ್ನು ಗಣಪತಿಶಾಸ್ತ್ರಿಗಳು ಅವಲಂಬಿಸಿ "ಖರಪಟಾತ್ ಕರ್ತೃನಾಮ ಪ್ರಸಿದ್ಧ ಚೌರ್ಯಶಾಸ್ತ್ರಾತ್ ಆಗಮಯೇತ್ ಅಧೀಯಾತ" ಎಂದು ಹೇಳಿದ್ದಾರೆ. ಮಹೇಂದ್ರ ವಿಕ್ರಮವರ್ಮನ "ಮತ್ತವಿಲಾಸ ಪ್ರಹಸನ"ದಲ್ಲಿ ಬರುವ ಶಾಕ್ಯ ಭಿಕ್ಷು "ಣಮೋ ಬುದ್ಧಾ ಅ" ಎಂದಾಗ ಕಪಾಲಿಯು "ನಮಃ ಖರಪಟಾಯೇತಿ ವಕ್ತವ್ಯಂ, ಯೇನ ಚೋರಶಾಸ್ತ್ರಂ ಪ್ರಣೀತಂ ಅಥವಾ ಖರಪಟಾದಪ್ಯಸ್ಮಿನ್ನಧಿಕಾರೇ ಬುದ್ಧ ಏವ ಅಧಿಕಃ" ಎಂದು ಉತ್ತರ ಹೇಳುತ್ತಾನೆ. ಭಾಸನ 'ಚಾರುದತ್ತ' ನಾಟಕದಲ್ಲಿ ಬರುವ ಸಜ್ಜಲಕನೆಂಬ ಕಳ್ಳನು "ನಮಃ ಖರಪಟಾಯ" ಎನ್ನುತ್ತಾನೆ (ಅಂಕ ೩. ೧೦ನೆಯ ಪದ್ಯವಾದಮೇಲೆ). ಸುಮಾರು ಕ್ರಿ.ಶ. ೭ನೆಯ ಶತಮಾನದ ತಮಿಳು ಕಾವ್ಯವಾದ "ಶಿಲಪ್ಪದಿಕಾರ"ದಲ್ಲಿ "ಇರವೇ ಪಗಲೇ ಯೆನ್ನಿರಣ್ಡಿಲ್. ಕರವಡಂ ಕೆಟ್ಟೋರ್ ಪುಗಲಿಡಮಿಲ್ಲೋ" ಎಂಬ ಪಂಕ್ತಿಗಳಲ್ಲಿ 'ಕರವಡ' ಎಂಬ ಹೆಸರು ಬಂದಿದೆ ; ಇದಲ್ಲದೆ ಶೂದ್ರಕನು 'ಪದ್ಮಪ್ರಾಭೃತಕ' ಎಂಬ ತನ್ನ ನಾಟಕದಲ್ಲಿ ಧೂರ್ತವಿಟ ಎಂಬ ಸಂಕೇತಗಳಿಂದ ಖರಪಟವನ್ನು ಸೂಚಿಸಿರುವಂತೆ ಕಾಣುತ್ತದೆ : ಬಾಣನು ತನ್ನ 'ಕಾದಂಬರಿ' ಯಲ್ಲೂ ದಂಡಿಯು 'ಅವಂತಿ ಸುಂದರೀ ಕಥಾ' ಎಂಬ ತನ್ನ ಗ್ರಂಥದಲ್ಲೂ ಸುಬಂಧು ತನ್ನ 'ವಾಸವದತ್ತಾ' ಎಂಬ ಕೃತಿಯಲ್ಲೂ, ಬುಧಸ್ವಾಮಿನ್ ಎಂಬಾತನು ತನ್ನ 'ಬೃಹತ್ಕಥಾಶ್ಲೋಕ ಸಂಗ್ರಹ'ದಲ್ಲೂ ಖರಪಟನೆಂಬ ಹೆಸರನ್ನು ಹೇಳಿದ್ದಾರೆ ; ಕರ್ಣೀಸುತ, ಖರಪಟ, ಮೂಲದೇವ, ಕಲಾಂಕುರ—ಎಂಬ ಈ ನಾಲ್ಕು ಹೆಸರುಗಳು ಒಬ್ಬನೇ ವ್ಯಕ್ತಿಯನ್ನು ನಿರ್ದೇಶಿಸುತ್ತವೆಯೆಂದು

ಪುರುಷೋತ್ತಮನು ತನ್ನ 'ತ್ರಿಕಾಂಡಶೇಷ'ವೆಂಬ ಕೋಶದಲ್ಲಿ ಹೇಳಿದ್ದಾನೆ. ಖರಪಟನೂ ಅವನ ಸ್ತೇಯ ಶಾಸ್ತ್ರವೂ ಕ್ರಿ.ಪೂ. ೩ನೆಯ ಶತಮಾನದಲ್ಲೇ ಪ್ರಸಿದ್ಧವಾಗಿತ್ತು. (ಎಂ. ರಾಮಕೃಷ್ಣ ಕವಿಗಳ Some Cryptic words in the Arthasasthra ಎಂಬ ಲೇಖನವನ್ನು ನೋಡಬಹುದು. *Journal Tirumalai Sri Venkateswara,* Vol. I, P. 41-50).

**೧೭೩.** ೨: ಪುನ್ನಾಗ—ಸುರಗಿಯ ಮರ; ವಕುಳ—ಪವಳದ ಮರ; ತಿಳಕ—ತಿಲಕ ಪುಷ್ಪದ ಮರ; ತಮಾಳ—ಹೊಂಗೆಮರ: ೩. ಕ್ರಮುಕ—ಅಡಕೆ, ನಾಳಿಕೇರ—ತೆಂಗು, ಜಂಬು—ನೇರಿಲೆ, ಜಂಬೀರ—ನಿಂಬೆ, ಪನಸ—ಹಲಸು; ಕದಳೀ—ಬಾಳೆ; ೯. ಸಹಕಾರ—ಸಿಹಿ ಮಾವು; ೫. ಕಿಕ್ಕಿಱಿಗಿಱಿದಿರ್ದ—ದಟ್ಟವಾಗಿ ತುಂಬಿದ್ದ; ೫. ಉಳಿಸೆಂಡು—ಒಂದು ಆಟವನ್ನು, ಚೆಂಡನ್ನು ಬಚ್ಚಿಟ್ಟು ಆಡುವ ಆಟ. ಉಳಿ—ಅಡಗು. ಈ ಆಟವನ್ನು ಪಂಪನೂ ಹೇಳಿದ್ದಾನೆ (ಪಂಪಭಾ. ೨-೩೦). ಅಲೋಕನ ವಿದ್ಯೆಯುಂ—ಅದೃಶ್ಯವಾಗುವ ವಿದ್ಯೆಯನ್ನು; ೭. ಉಳಿದೊಡಂ—ಅಡಗಿಕೊಂಡರೂ; ೮. ಕಾಪಿನೊಳ್—ನಗರ ರಕ್ಷಣೆಯಲ್ಲಿ; ೯. ತಳಾಱಿಗೆಯ್ವಂದು—ತಳವಾರನ ಕಾರ್ಯವನ್ನು ಮಾಡುವಾಗ; ೧೧. ನುಡಿದೊಡೆ—ಪ್ರತಿಜ್ಞೆ ಮಾಡಿದರೆ; ೧೨. ಮೊದಲಿಸಿ—ಮರುದಿನದ ಮಾತಾಡಿ, (ತಮಿಳು) ಮೊದಲಿ—ನಿರೂಪಿಸುವುದು; ೧೩. ಸಂತಾನಮಂ—ವಂಶಪರಂಪರೆಯಿಂದ ಬಂದುದನ್ನು; ಇಲ್ಲಿ ತಳವಾರಿಕೆಯನ್ನು; ೨೦. ಅರಯ್ಸಿಯುಮಂ—ಹುಡುಕಿಸಿಯೂ: ೨೬. ಮನೆವಾೞ್ತೆಗೆ—ಮನೆಯ ಕೆಲಸಕ್ಕೆ; ೨೭. ಎನ್ನ ಬರ್ಪನ್ನೆಗಂ—ನಾನು ಬರುವವರೆಗೂ; ೨೮. ಕಲ್ಪಿಸಿ—ಕಲಿಸಿ ಹೇಳಿ; ಕಪ್ಪಡಮಂ—ಬಟ್ಟೆಯನ್ನು; ೨೯. ಪಱಿದು—ಹರಿದು.

**೧೭೪.** ೩: ಅಧಿಗಮ ಸಮ್ಯಗ್‌ದೃಷ್ಟಿಯೆನ್—ಸಂಪಾದಿಸಿದ ಸಮ್ಯಗ್ದೃಷ್ಟಿಯುಳ್ಳವನಾಗಿದ್ದೇನೆ; ೪. ವಾರದು—ಬಾರದು; ೬. ಮೊದಲ್ಗೊಂಡಗುಳ್ದು—ಮೊದಲಿನಿಂದ ಆರಂಭಿಸಿ; ೧೦ ಅಗ್ರಪದಂಗೊಂಡು—ಪಟ್ಟುಹಿಡಿದು; ೧೨. ದುರ್ಗುಟ್ಟಿಲಾರ್ಪೊಡೆ—ಬಿಡಿಸಲು ಸಮರ್ಥನಾದರೆ: ೧೩. ತನ್ನಾರ್ಪ ತೆಱದಿಂ—ತನಗೆ ಸಾಧ್ಯವಾಗುವಷ್ಟು ರೀತಿಯಿಂದ: ೨೪. ಉಪಸರ್ಗಂಗೆಯ್ದು—ತೊಂದರೆಯನ್ನು ಮಾಡಿ; ತನ್ನ ತೊಟ್ಟ—ತಾನು ಧರಿಸಿದ: ೧೮. ಪರಿವ್ರೊಟ್ಟೆಯವರ್—ಒಂಟೆಯನ್ನೇರಿ ಬರುವ ಹರಿಕಾರರು, ದೂತರು; ೨೨. ಸಂಧಿವಿಗ್ರಹಿ—ರಾಜನ ಒಬ್ಬ ಅಧಿಕಾರಿ; ೨೨. ವಾಚಿಸಿದಂ—ವಾಚಿಸಿದನು, ಓದಿದನು; ೨೫. ಪೆಱತಣ—ಹಿಂದಿನ, ಮೊದಲಿನ; ಮನೆವಾೞ್ತೆಯುಂ—ಮನೆಗೆಲಸವನ್ನು; ೨೬. ಈಯೋಲೆಯುಂ—ಈ ಪತ್ರವನ್ನು; ತಡಮಾಡದೆ; ೨೭. ಈತನ ಪೇೞ್ದುದುಂ—ಇವನು ಹೇಳಿದ್ದೂ; ಇಲ್ಲಿ ಷಷ್ಠಿ ಬಂದಿದೆ.

**೧೭೫.** ೧: ಮಂಡಳಿಕಂ—ಸಾಮಂತ, ಮಂಡಲಾಧೀಶ್ವರ; ಓರಂತಪ್ಪ—ಸಮಾನವಾದ; ೫. ಆಲೇಖ್ಯ—ಚಿತ್ರವಿದ್ಯೆ: ೬. ಪತ್ರಚ್ಛೇದ—ಭೂರ್ಜಾದಿ ಪತ್ರಗಳನ್ನು ಏಕಪ್ರಕಾರವಾಗಿ ಕತ್ತರಿಸುವುದು; ೮. ಪಾಗುಡಂಗಳುಮಂ—ಉಡುಗೊರೆ ಕಾಣಿಕೆ ಮುಂತಾದುವುಗಳನ್ನು; ೯. ತಾಂಗಿರ್ದೆನ್—ತಡೆದಿದ್ದೆನು; ೨೦. ಯೋಗ್ಯನಯ್—ಯೋಗ್ಯನಾಗಿರುವೆ; ೨೨. ಜೇಂಟಂಗೊಂಡಿರ್ದೆನ್—ಪ್ರೀತಿಪಟ್ಟಿರುವೆನು; ವಿದೆಂ—ವಿನುಮಾಡಲಿ; ೧೩. ಪೆಂಡತಿಗೆ—ಹೆಂಡತಿಗೆ; ೪. ಪರಿಚ್ಛೇದಿಸಿ—ಖಂಡಿತವಾಗಿ: ನಿಶ್ಚಯಿಸಿ; ೩೭. ಅಷ್ಟಶೋಭೆಯುಂ—ಕಳಸ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ ಎಂಬ ೮ ಅಲಂಕಾರಗಳನ್ನು; ೨೭. ಕೂಸನಯ್—ಸಣ್ಣ ಪ್ರಾಯದವನಾಗಿರುವೆ: ೨೯, ಪ್ರಸ್ತುತಂಗಳಂ—ತಾತ್ಕಾಲಿಕ ಆಗಿನ ವಿಷಯಗಳನ್ನು.

**೧೭೬. ಶ್ಲೋಕ॥** ಸಂಸಾರವರ್ತಿನಾಂ—ಸಂಸಾರದಲ್ಲಿರುವವರ, ಆಯುಃ—ಆಯುಸ್ಸು, ಡಿಂಡೀರ ಪಿಂಡ ಸಂಕಾಶಂ—ನೊರೆಯ ಉಂಡೆಗೆ ಸಮಾನ; ರೂಪ ಯೌವನಂ—ರೂಪವೂ ಯೌವನವೂ, ಆಖಂಡಲ—ಇಂದ್ರನ, ಧನುಷ್ಕಾಂಡ—ಬಿಲ್ಲಿನ ಕೋಲಿಗೆ, ಸನ್ನಿಭಂ—ಸಮಾನವಾದದ್ದು.

**ವೃ॥** ಪುಟ ೬೮ ನೋಡಿ.

ನಾಶಕರವಾದ ಪಾದಗಳೆಂಬ. ಸ್ಫೂರ್ಜತ್—ಪ್ರಕಾಶಮಾನವಾದ. ದವಾಗ್ನಿ—ಕಾಳ್ಗಿಚ್ಚಿನ. ಛದೇ—ಹೊದಿಕೆಯನ್ನುಳ್ಳ, ಜನ್ಮಾಟವೀ ಸಂಕಟೇ—ಜನ್ಮವೆಂಬ ಅರಣ್ಯದ ಇಕ್ಕಟ್ಟಿನಲ್ಲಿ, ನಿಸ್ತ್ರಾಣಸ್ಯ—ತ್ರಾಣವಿಲ್ಲದ, ವಿಚೇತಸಃ—ಚೈತನ್ಯವಿಲ್ಲದ, ವೃಥತೃಷಾ ದುಃಖಾಕುಳಸ್ಯ—ಬಲವಾದ ಆಸೆಯೆಂಬ ದುಃಖದಿಂದ ಪೀಡಿತನಾದ, ಅಂಗಿನಃ—ದೇಹಿಗಳಿಗೆ. ಜೈನಂ ಶಾಸನಮೇಕಮೇವ—ಜಿನನ ಆಜ್ಞೆಯೊಂದೇ. ಶರಣಂ—ಆಶ್ರಯಸ್ಥಾನವು.

೧೭೭. ವೃ ॥ ಇದಂ ಶರೀರಂ—ಈ ದೇಹವು, ಯಾವತ್—ಎಲ್ಲಿಯತನಕ. ಸ್ವಸ್ಥಂ ಅರುಜಂ—ಕ್ಷೇಮವಾಗಿಯೂ ರೋಗರಹಿತವಾಗಿಯೂ ಇರುವುದೋ. ಜರಾ—ಮುಪ್ಪು. ಯಾವತ್—ಎಲ್ಲಿಯವರೆಗೆ. ದೂರತಃ—ದೂರದಲ್ಲಿರುವುದೋ, ಇಂದ್ರಿಯಶಕ್ತಿಃ—ಇಂದ್ರಿಯಗಳ ಬಲವು. ಯಾವತ್—ಎಲ್ಲಿಯವರೆಗೆ, ಅಪ್ರತಿಹತಾಃ—ಕುಗ್ಗದಿರುವುದೋ. ಯಾವತ್—ಎಲ್ಲಿಯವರೆಗೆ, ಆಯುಷಃ—ಆಯುಸ್ಸಿನ. ನ ಕ್ಷಯೋ—ಕ್ಷಯವಿಲ್ಲವೋ, ತಾವತ್—ಆಗಲೇ. ವಿದುಷಾ—ಬುದ್ಧಿವಂತನಿಂದ. ಆತ್ಮಶ್ರೇಯಸಿ—ಆತ್ಮದ ಶ್ರೇಯಸ್ಸಿಗಾಗಿ, ಮಹಾನ್ ಪ್ರಯತ್ನಃ—ವಿಶೇಷವಾದ ಪ್ರಯತ್ನವು. ಕಾರ್ಯಃ—ಮಾಡಲ್ಪಡತಕ್ಕದ್ದು. ಭವನೇ—ಮನೆಯು, ಪ್ರೋದ್ದೀಪ್ತೇ ಸತಿ—ಹತ್ತಿಕೊಂಡು ಉರಿಯುತ್ತಿರಲು. ಕೂಪಖನನಂ—ಬಾವಿಯನ್ನು ತೋಡುವುದಕ್ಕಾಗಿ. ಪ್ರತ್ಯುದ್ಯಮಃ—ಪ್ರಯತ್ನವು, ಕೀದೃಶಃ—ಎಂತಹುದು ?

೬. ಅವಱ—ಆ ಪದ್ಯಗಳ. ನೆರವಿಗೆಲ್ಲಂ—ಜನಸಮೂಹಕ್ಕೆಲ್ಲ : ವಖ್ಯಾಣಿಸಿ—ವ್ಯಾಖ್ಯಾನ ಮಾಡಿ :

ಕಂ ॥ ಎನ್—ನಾನು. ಅಣ್ದನ್—ಸ್ವಾಮಿ, ರಾಜ : ಎನಗೆ—ನನಗೆ. ಇವರ್—ಇವರು. ಆಳ್ಗಳ್—ಸೇವಕರು. ಏನಾಯ್ತು—ಏನಾದುದು, ಏಂದು : ಅಱಿದುಮಱಿಯದೆ—ತಿಳಿದೂ ತಿಳಿಯದೆ, ಉಱದೆ—ಲಕ್ಷಿಸದೆ. ಆಂ—ನಾನು, ನುಡಿದ—ಹೇಳಿದ, ಏನಾನುಂ—ಏನಾದರೂ ಒಂದು, ಏದಂ—ಒಂದು ಕೋಪ ಅಥವಾ ಅಸಮಾಧಾನ. ಮನದೊಳ್—ಮನಸ್ಸಿನಲ್ಲಿ, ಉಳ್ಳೊಡಂ—ಇದ್ದರೂ. ಆ ನುಡಿಯಂ—ಆ ಮಾತನ್ನು, ಮಱೆಯಂ—ಮರೆತುಬಿಡಿರಿ. ಇಂ—ಇನ್ನುಮುಂದೆ, ಎಲ್ಲಂ—ಎಲ್ಲವೂ, ನಿಶ್ಶಲ್ಯಂ—ಪಾಪಾನುಷ್ಠಾನರಹಿತವಾದದ್ದು.

**ಗಾಹೆ** ॥ ಪುಟ ೪೮ ನೋಡಿ.

೨೫. ಈತನಂ ಪಿಡಿದು—ಇವನನ್ನು ಅವಲಂಬಿಸಿ : ೧೬. ತಳಾಱಿಕೆಯಂ—ತಳಾರತನವನ್ನು : ೨೭. ಪಟ್ಟವರ್ಧನಮನೇಱಿ—ಪೂಜಾಗಜವನ್ನು ಹತ್ತಿ ; ಪೆಂಡವಾಸದ—ಅಂತಃಪುರದ ; ೨೮. ಸೋಳೆಯರಿರ್ವರ್—ಇಬ್ಬರು ದಾಸಿಯರು, ಪಿಱಿಗೇಱಿ—ಹಿಂದುಗಡೆ ಹತ್ತಿ : ಇರ್ಕೆಲದೊಳಂ—ಎರಡು ಮಗ್ಗುಲುಗಳಲ್ಲಿ ; ೨೯. ತಜಿನಪಟಿಯಿಗೆಗಳುಂ—ಒಂದು ತೆರನಾದ (?) ಬಾವುಟಗಳೂ : ೨೬. ಮುಱುಗಲೀಯದೆ—ಮುಳುಗುವುದಕ್ಕೆ ಅವಕಾಶ ಕೊಡದೆ ; ಎತ್ತಿಂ—ಎತ್ತಿರಿ : ೧೮. ಕಟಕ—ಬಳೆ, ಕಟಿಸೂತ್ರ—ಉಡಿದಾರ ; ಕಳೆದು—ತೆಗೆದುಹಾಕಿ ; ೨೯. ತೊಱೆದು—ಬಿಟ್ಟು ; ತಪಂಬಟ್ಟಂ—ತಪಸ್ಸನ್ನು ಸ್ವೀಕರಿಸಿದನು.

೧೭೮. ೨ : ಅತ್ತೆವಿರಪ್ಪ—ಅತ್ತೆಗಳಾದ : ಕಂತಿಯರ್—ಜೈನ ಸಂನ್ಯಾಸಿನಿಯರು ; ೩. ಗಿಡಿಗಿಡಿ ಜಂತ್ರಂ ಮಿಳಿಮಿಳಿ ನೇತ್ರರಾಗಿ—ಸವೆದುಹೋಗಿ ಸಣಕಲಾದ ದೇಹವನ್ನೂ ಗುಳಿಬಿದ್ದ ಕಣ್ಣುಗಳನ್ನೂ ಉಳ್ಳವರಾಗಿ (ಎಂದು ತಾತ್ಪರ್ಯಾರ್ಥ). ಹೆಣ್ಣಾನೆಯನ್ನು ಬಯಸಿ ಪಡೆಯದ ಒಂದು ಗಂಡಾನೆ ವಿರಹದಿಂದ ದೇಹವನ್ನು ಬಿಟ್ಟು ಕೃಶವಾಯಿತೆಂಬುದನ್ನು "ಕಾಮೋಳ್ ಮದನವ್ಯಾಸಂಗದಿಂ ದುರ್ಗದು ಗಿಡಿಗಿಡಿ ಜಂತ್ರಂ ಬೋಲಂಬೊಂದಿಭೇಂದ್ರಂ" ಎಂದು ನೇಮಿಚಂದ್ರನ ಪ್ರಯೋಗ (ಲೀಲಾ. ೮–೫) : ೪೪. ಸಮೆವನ್ನೆಗಂ—ಮುಗಿಯುವವರೆಗೂ : ಬಾರಿಸಿದೊಡೆ—ಅಡ್ಡಪಡಿಸಿದರೆ : ೪೫. ಬಗೆದ್ದುಪ್ಪಳ್—ಏನು ಮಾಡುತ್ತಾಳೆ : ೪೮. ಪೊಱಸುಗಳನಿರಿಯುವು—ಪಾರಿವಾಳಗಳಷ್ಟು ದೊಡ್ಡವಾದ ; ಪಂಸುಮುಸಕಂಗಳಂ—ಚಿಗಟ ಗುಂಗುರಗಳನ್ನು ; ೨೯. ವಿಗುರ್ವಿಸೆ—ಮಾಯೆಯಿಂದ ನಿರ್ಮಿಸಲು ; ೨೦. ವೇದನೆ—ಯಾತನೆ.

**೧೭೯.** ೨ : ಮನದೊಳ್ ಬಗೆದು—ಮನಸ್ಸಿನಲ್ಲಿ ಧ್ಯಾನಿಸಿ ; ೪. ಮೊದಲಾಗೊಡೆಯವೆಲ್ಲಂ ಪಪ್ಪ—ಮೊದಲಾಗುಳ್ಳವುಗಳಿಂದಾಗುವ ; ೫. ರತ್ನತ್ರಯಂಗಳಂ—ಮೂರು ರತ್ನಗಳನ್ನು ಎಂದರೆ ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರಗಳನ್ನು ; ಅಪವರ್ಗ—ಮೋಕ್ಷ.

## ೧೪. ಗುರುದತ್ತ ಭಟಾರರ ಕಥೆ

**೧೮೦.** ೬ ಸೂಡಿಪ್ಪೊತ್ತಿಸೆ ಪಟ್ಟನಂತೆ—ಸುತ್ತಿ ಉರಿಯಿಂದ ಹೊತ್ತಿಸಲ್ಪಟ್ಟವನಂತೆ ; ೬. ಪರ್ವತದ ಸಾರೆ—ಬೆಟ್ಟದ ಹತ್ತಿರ : ೧೨. ಸಾವಸ್ತಿ—ಶ್ರಾವಸ್ತಿ ಎಂಬ ನಗರ : ೧೯. ಅಂಕುರಿತ—ಮೊಳೆತ ; ಪಲ್ಲವಿತ—ಚಿಗುರಿದ ; ಕೋರಕಿತ—ಮೊಗ್ಗೊಡೆದ ; ಕುಸುಮಿತ—ಹೂಬಿಟ್ಟ ; ೧೦. ಅಣುಗರ್ಕಳುಂ—ಮಕ್ಕಳೂ : ೧೧. ಏರಿದು ಪೇಗಂ—ಬಹುಕಾಲ : ೧೩. ಮಣಿಕುಟ್ಟಿಮಮಪ್ಪ—ರತ್ನಖಚಿತವಾದ ನೆಲಗಟ್ಟುಳ್ಳ ; ಬೊಪ್ಪಣ ಬಾವಿಯೊಳ್—ದೊಡ್ಡ ಬಾವಿಯಲ್ಲಿ, ಕೊಳದಲ್ಲಿ (?) (ಸಂ) ವರ್ಧನವಾಪಿ (?). ಈ ಶಬ್ದವನ್ನು ಬಂಧುವರ್ಮ ಎರಡು ಸಲ ಬಳಸಿದ್ದಾನೆ. "ಅತನಂ ಬೊತ್ತಣದ ಬಾವಿಯೊಳಗೆ ಪುಗುವಂತೆ ಗೆಯ್ದು" (ಜೀವಸಂ. ೨೧–೬೩). "ತುಂಬಿದ ಬೊಪ್ಪಣ ವಾವಿಯು ತೂಬಂ ತಡವರಿಸಿ ಕಂಡನಂ ಕಳಿದಲ್ಲಿಂ ॥ ದಂ ಬೇಗಂ ಪೊಱಮಡೆ. ಕಂಡೇಂ ಬಲ್ಲಿತ್ತೊ ಪುಣ್ಯಮೆಂದು ವನದೇವತೆಗಳ್" (ಅದೇ. ೧–೬೪). ಇಂಥ ಬಾವಿಗೆ ನೀರನ್ನು ತುಂಬಬಹುದು, ಕೆಳಗಿರುವ ತುಂಬಿರುವ ನೀರನ್ನು ಹೊರಕ್ಕೆ ಬಿಡಬಹುದು. ಇದನ್ನು ಜಲಕ್ರೀಡೆಗೂ ಮಿಂದುವುದಕ್ಕೂ ಉಪಯೋಗಿಸುತ್ತಿದ್ದರು (ಸುಕುಮಾರಸ್ವಾಮಿಯ ಕಥೆ. ಪು. ೪೪–೪೮ ನೋಡಿ) : ೩೩. ಬೆರಸಿಪಟ್ಟು ಪಡೆತ್ತೊಳ್—ಬೆರೆಸಲ್ಪಟ್ಟದ್ದರಲ್ಲಿ ; ೨೪. ಕುವಳಯಂ—ಕನ್ನೈದಿಲೆ ; ೨೫. ಸಂಛನ್ನಮಪ್ಪುದ ಜಿಱೊಳ್—ಮುಚ್ಚಲ್ಪಟ್ಟಿರುವುದರಲ್ಲಿ.

**೧೮೧.** ೧ : ಬಳಾಕ—ಒಂದು ನೀರಹಕ್ಕಿ ; ಮಂಡೂಕ—ಕಪ್ಪೆ ; ಜೀವಂ ಜೀವಕ—ಒಂದು ಬಗೆಯ ಪಕ್ಷಿ ; ಜಲಚರವಿಹಂಗ—ನೀರ ಪಕ್ಷಿಗಳು : ೮. ಒಡೆಯುದೆಱೊಳ್—ಉಳ್ಳುದರಲ್ಲಿ : ೩. ಜೀರ್ಣಕಪಿಗಳಿಂದಂ—ಬಿಡಕಾರಿಗಳಿಂದ : ತಳಿಯುತ್ತುಂ—ಚಿಮುಕಿಸುತ್ತ ; ೯. ಭೌಮವಿಹಾರಕ್ಕೆಂದು—ಭೂಮಿಯ ವಿಹಾರಕ್ಕಾಗಿ ; ೧೧. ವಿಳಪೆಂದಿರಿಂದಂ—ಕೋಮಲರಾದ ಸ್ತ್ರೀಯರಿಂದ ; ೧೫. ತೂರ್ಯಧ್ವನಿಗಳ್—ವಾದ್ಯಧ್ವನಿಗಳು ; ೧೭. ನಿಱಿಸಿ—ನಿಲ್ಲಿಸಿ : ೧೮. ನಾಮಾಕಾಶದೊಳ್ ಕಾಗೆಗಳಂತಿರೆ ; ಹಾಱುವಮಲ್ಲದೆ—ನಾವು ಆಕಾಶದಲ್ಲಿ ಕಾಗೆಗಳ ಹಾಗೆ ಹಾರುವಷ್ಟಲ್ಲದೆ. ಈ ಮಾತುಗಳನ್ನು "ಅಂಗಾರಕವಾರದ ಪೆಸರ್ ಮಂಗಳವಾರಮೆಂಬಂತೆ ಬಱಿದೆ ಕಾಗೆಗಳಂತಂತರಿಕ್ಷದೊಳ್ ಹಾಱುವ ನಮಗೆ ವಿದ್ಯಾಧರರೆಂಬೊಂ ಪೆಸರಲ್ಲದೆ" ಎಂಬಲ್ಲಿ ನಯಸೇನ ಅನುಕರಿಸಿದ್ದಾನೆ. (ಧರ್ಮಾ. ೯೪–೨೧). ನಯಸೇನನ ಮಾತುಗಳನ್ನು "ಅಂಗರವಾರದ ಪೆಸರನು ಮತ್ತೊಮ್ಮೆ ಮಂಗಳವಾರಮೆಂಬಂತೆ, ಬಂಗದ ಬಿರಿಯಾಗಸದೊಳು ಕಾಗೆಕೆಳಂದಿರ ಹಾರುವ ತೀರುನಮಗೆ" ಎಂಬುದಾಗಿ ದೇವರಸನು ತನ್ನ 'ಗುರುದತ್ತಚರಿತ್ರೆ'ಯಲ್ಲಿ (೯-೨೦೦) ಅನುವದಿಸಿದ್ದಾನೆ.

೨೧. ಬರ್ದ—ಬದುಕಿದ < ಬಟ್ಟು < ಬಾೞ್ ; ಪುರುಡಿಸಿ—ಮತ್ಸರಿಸಿ ; ೧೫. ವಿಗುರ್ವಿಸಿ—ಮಾಯೆಯಿಂದ ಸೃಷ್ಟಿಸಿ ; ೧೭. ನಿಶ್ಛಿದ್ರಮಾಗಿ—ರಂಧ್ರವಿಲ್ಲದಂತೆ.

**೧೮೨.** ೧ : ಮೋಱಸದ ಬುದ್ಧಿಯನೊಡೆಯರ್—ಆಸೆಪಡದ ಬುದ್ಧಿಯುಳ್ಳವರು ; ೯. ಪೆರ್ಮವಾಗಿ—ಹೆಬ್ಬಾವು ಆಗಿ ; ೫. ಸುಹಿನಿವೇದಕಂ—ಸುಖಿಯ ಆಗಮನವನ್ನು ತಿಳಿಸುವವನು ; ೮. ಗುರುಪರಿವಿಡಿಯಿಂದಂ—ಗುರುಪರಂಪರೆಗೆ ಅನುಸಾರವಾಗಿ : ೧೦. ಅಕಸ್ಮಿಕಂ—ಅಪಘಾತ ; ಬಿರ್ಪೊದಲ್—ಏಕಕಾಲದಲ್ಲಿ ; ಅನಿಬರ್ಗಂ—ಅಷ್ಟುಮಂದಿಗೂ ; ೧೩. ಅಮುತ್ತಿರ್ಪನ್ನೆಗಂ—ಆಡುತ್ತಿರಲು ; ೧೫. ವಿಭವಮುಂ—ವೈಭವವನ್ನು.

**೧೮೩.** ೭ : ನಿಮ್ಮುಮಂ—ನಿಮ್ಮನ್ನು ; ೮. ಪ್ರತಿಬೋಧಿಸಲ್ಕೆ—ಎಚ್ಚರ ಹೇಳುವುದಕ್ಕೆ ; ೧೧. ಮಹಾಕಾಯ—ದೊಡ್ಡ ದೇಹವುಳ್ಳ ; ೧೭. ಬಾಟ್ಕೆಯೊಳು—ಬಾಳುವಿಕೆಯಲ್ಲೂ : ಆಟ್ಟಿಯೆ—ಆದರವೆ ?

**ಶ್ಲೋಕ ॥** ಕರ್ಮವಶಾನುಗಾಃ—ಕರ್ಮಕ್ಕೆ ವಶರಾಗಿ ನಡೆಯುವ, ಜೀವಾಃ—ಜೀವಿಗಳು, ಯತ್ರ ಯತ್ರ—ಎಲ್ಲೆಲ್ಲಿ. ಉತ್ಪದ್ಯಂತೇ—ಹುಟ್ಟುವರೋ. ತತ್ರ ತತ್ರ—ಅಲ್ಲಲ್ಲೇ, ಸ್ವೇನ ಸ್ವೇನೈವ ಕರ್ಮಣಾ—ತಂತಮ್ಮ ಕರ್ಮಗಳಿಂದ; ರತಿಂ ಯಾಂತಿ—ಆಸಕ್ತರಾಗುತ್ತಾರೆ. ೧೩. ಸೂಳೆಯರ್ಕಳಿಂದಂ—ದಾಸಿಯರಿಂದ: ಇರ್ಪಾತನಯ್—ಇರುವವನಾಗಿದ್ದೀಯೆ.

**೧೮೪.** ೧: ಪೆರ್ವಾವುಗಳೊಡನೆ—ಹೆಬ್ಬಾವುಗಳ ಸಂಗಡ; ನೆರೆದ—ಕೂಡಿದ: ಇರವಮಾಯ್ತು—ಇರವು ಎಂದರೆ ಇರುವಿಕೆಯು ಆಯಿತು: ೧. ಪೆಟ್ಟಿಗೆಗಳುಂ—ಹೆಂಟೆಗಳೂ; ಬಂತಿಗನುಂ ಕಿಱುಗಲ್ಗಳುಂ—ಸಣ್ಣ ಕಲ್ಲುಗಳೂ: ೪. ಎಸಡುಗಳುಂ—ಏಡಿಗಳೂ, ನಳ್ಳಿಗಳೂ; ಓತಿಕೇತುಗಳೂ; ೫. ಇನ್ನವಂ—ಇಂಥವುಗಳನ್ನು: ೬. ಜಾತಿಸ್ಮರನಾಗಿ—ಹಿಂದಿನ ಜನ್ಮದ ನೆನಪುಂಟಾದವನಾಗಿ.

**ವೃ ॥** ಏತತ್ ಕ್ಷೇತ್ರಂ ಮದೀಯಂ—ಈ ನೆಲ ನನ್ನದು: ಇದಂ ಗೃಹಂ ಅಪರಂ—ಈ ಮನೆ ಬೇರೆಯವರದಲ್ಲ, ಎಂದರೆ ನನ್ನದೇ; ಏತಾಃ—ಈ, ಮಾತೃಭಾರ್ಯಾ—ತಾಯಿಯೂ ಹೆಂಡತಿಯೂ, ಮಮ—ನನ್ನದು. ಅಯಂ ಪುತ್ರಃ—ಈ ಮಗನು, ಮೇ—ನನ್ನವನು, ಸುಕಾಂತ—ಸುಂದರಿಯರಾದ, ಸ್ವಸೃದುಹಿತೃಜನೋ—ಸೊಸೆಯರೂ ಹೆಣ್ಣುಮಕ್ಕಳೂ. ಮಾನುಷಾಃ—ಮನುಷ್ಯರೂ. ಬಂಧುವರ್ಗಃ—ನಂಟರ ಗುಂಪೂ, ಮೇ—ನನಗೆ. ಅಶ್ವಾಃ—ಕುದುರೆಗಳು. ದಾಸಾಃ—ಸೇವಕರು. ಮಮ—ನನ್ನ. ಪರಮ ಹಿತಾಃ—ಅತ್ಯಂತ ಹಿತರಾದವರು; ದ್ರವ್ಯ ಗಾವೋ ಮಹಿಷ್ಯಃ—ಹಣವೂ ಹಸುವೂ ಎಮ್ಮೆಗಳೂ, ಮೇ—ನನಗೆ, ಇತ್ಯೇವಂ—ಎಂದು ಹೀಗೆ, ಬ್ರುವಾಣಃ—ಹೇಳಿಕೊಳ್ಳುವ. ನರಪಶುಃ—ಮನುಷ್ಯಪ್ರಾಣಿಯು ಆತ್ಮಕಾರ್ಯಂ—ಆತ್ಮನಿಗೆ ಸೇರಿದ ಕಾರ್ಯವನ್ನು, ಅನಿಶಂ—ಯಾವಾಗಲೂ, ನಾಶಯತಿ—ನಾಶಮಾಡಿಕೊಳ್ಳುತ್ತಾನೆ.

**ಆರ್ಯೆ ॥** ಅರ್ಥೋ—ಐಶ್ವರ್ಯವು. ಮೇ—ನನಗೆ. ಭಾರ್ಯಾ—ಹೆಂಡತಿಯು. ಮೇ—ನನಗೆ. ಪುತ್ರ—ಮಗನು. ಮೇ—ನನಗೆ. ಸ್ವಜನಬಂಧುವರ್ಗಃ—ಸ್ವಜನರಾದ ನಂಟರ ಸಮುದಾಯ. ಮೇ—ನನಗೆ. ಇತಿ—ಹೀಗೆ. ಮೇ ಮೇ ಕುರ್ವಾಣಂ—ನನಗೆ ನನಗೆ ಎಂದು ಮಾಡಿಕೊಳ್ಳುವವನಾದ. ಪುರುಷಪಶುಂ—ನರಜಂತುವನ್ನು, ಕಾಲವೃಕಃ—ಯಮನೆಂಬ ತೋಳನು. ಹಂತಿ—ಕೊಲ್ಲುತ್ತದೆ.

೨೧. ತೊೞ್ತಿರ್—ಸೇವಕರು: ೨೨. ಪಟ್ಟೆಸ ಭಂಡಾರಂ—ರೇಷ್ಮೆಯ ವಸ್ತ್ರಗಳ ಭಂಡಾರ. ಪಟ್ಟೆಸ<ಪಟ್ಟವಾಸ (ಸಂ): ೨೩. ಇವಱೊಳ್—ಇವುಗಳಲ್ಲಿ; ೨೪. ಇನಿವಿರಿದು—ಇಷ್ಟು ಹಿರಿದಾದ; ೨೫. ಪಿಯ್ದುದಂ—ಸೇರಿದೆವು. ಪಡೆದೆವು; ತೋಱಲ್ವೇಡ—ತೋರಿಸಲು ಬಾರದು.

**೧೮೫.** ೧: ಸಂಛನ್ನಮಾಗಿ—ಮುಚ್ಚಿ. ವ್ಯಾಪಿಸೆ—ಆವರಿಸಲು; ೬. ಪರಮಸತ್ವದ—ಪರಮಶಕ್ತಿಯ; ೯. ಪ್ರತಿಬೋಧಿಸಿ—ಎಚ್ಚರಿಸಿ. ತಿಳಿಸಿ; ೧೧. ಅನುಮಾನುಂ—ವಿಶೇಷವಾಗಿ.

**ಗಾಹೆ ॥** ಪುಟ ೧೧ ನೋಡಿ.

**ವೃ ॥** ಪಾಪಾನಿ—ಪಾಪಗಳನ್ನು. ಯತ್ನೇನ—ಪ್ರಯತ್ನದಿಂದ. ಸಮಾಚರಂತಿ—ಮಾಡುತ್ತಾರೆ. ಪ್ರಸಂಗಾದಪಿ—ಸಂದರ್ಭವಶದಿಂದಾದರೂ, ಧರ್ಮಂ—ಧರ್ಮವನ್ನು. ನಾಚರಂತಿ—ಮಾಡುವುದಿಲ್ಲ; ಏತತ್—ಇದು, ಮನುಷ್ಯಲೋಕೇ—ಮಾನವಪ್ರಪಂಚದಲ್ಲಿ. ಆಶ್ಚರ್ಯಂ—ಆಶ್ಚರ್ಯವು; ಹಿ—ಅಲ್ಲವೆ? ಕ್ಷೀರಂ—ಹಾಲನ್ನು. ಪರಿತ್ಯಜ್ಯ—ಬಿಟ್ಟು. ವಿಷಂ—ವಿಷವನ್ನು. ಪಿಬಂತಿ—ಕುಡಿಯುತ್ತಾರೆ.

**ವೃ ॥** ಸರ್ವೇ—ಎಲ್ಲ. ಸಮಾಗಮಾಃ—ಸೇರುವಿಕೆ. ಸ್ವಾಧೀನಾಹಿ—ತನ್ನ ವಶದಲ್ಲಿ ಇಲ್ಲದ್ದು. ವಿಭೂತಯೋಽಪಿ—ಐಶ್ವರ್ಯಗಳು ಕೂಡ. ಕ್ಷಣಭಂಗುರಾಃ ಸ್ಯುಃ—ಅಲ್ಪಕಾಲದಲ್ಲಿ ನಾಶವಾಗುವವಲ್ಲವೆ: ಅರ್ಥಾನಾಂ—ಅರ್ಥಾಂತರ: ಅಯಂ ಧರ್ಮಮೇವ—ಈ ಧರ್ಮವೇ. ಸುಶಾಶ್ವತಃ—ಅತ್ಯಂತ ಶಾಶ್ವತವಾದುದು. ಇತಿ—ಹೀಗೆಂದು. ಪ್ರಚಿಂತ್ಯ—ವಿಶೇಷವಾಗಿ ಚಿಂತನೆ ಮಾಡಿ. ಆತ್ಮರತಿಃ—ಆತ್ಮನಲ್ಲಿ ಆಸಕ್ತಿಯು. ಬಭೂವ—ಹುಟ್ಟಿತು.

**ವೃ ॥** ಉದಿತಸ್ಯ—ಹುಟ್ಟಿದ. ರವೇಃ—ಸೂರ್ಯನ. ಪತನಂ—ಬೀಳುವುದು [illegible]

ವೃಷು, ನಿಶ್ಚಯಂ—ದಿಟ. ಜಾತಸ್ಯ—ಜನ್ಮತಾಳಿದ. ಸರ್ವಸ್ಯ—ಎಲ್ಲರಿಗೂ. ಮರಣಂ—ಸಾವು. ಅಪಿ—ಕೂಡ. ನಿಶ್ಚಯಂ ; ತಸ್ಮಾತ್—ಆದ್ದರಿಂದ. ಜಾತೇನ—ಹುಟ್ಟಿದ. ಧರ್ಮಕರ್ಮರತೇನ —ಧರ್ಮಕರ್ಮದಲ್ಲಿ ಆಸಕ್ತಿಯುಳ್ಳ. ವಿದುಷಾ—ವಿದ್ವಾಂಸನಿಂದ. ಸದಾ—ಯಾವಾಗಲೂ. ಭಾವ್ಯಂ ಏವ—ಭಾವಿಸಲ್ಪಡಬೇಕಾದದ್ದೇ.

**ವೃ ॥** ಯೌವನ ಬಲ ವಿಭವರೂಪ ಸೌಭಾಗ್ಯಾನಿ—ಪ್ರಾಯ ಶಕ್ತಿ ವೈಭವರೂಪ ಸೌಭಾಗ್ಯಗಳು. ಪುಷ್ಪಫಲಭಾರತರುವತ್—ಹೂವು ಹಣ್ಣುಗಳ ಭಾರವನ್ನುಳ್ಳ ಮರದಂತೆ; ಸರ್ವೇಷಾಂ—ಎಲ್ಲರ. ಜೀವಿತಂ ಚ—ಬದುಕು ಕೂಡ. ಗಿರಿನದೀಯುಘಃ ಪ್ರತಿಮಂ—ಬೆಟ್ಟದ ಧುಮುಕುವ ನೀರಿಗೆ ಸಮಾನ, ಶೀಘ್ರಂ—ತ್ವರಿತವಾಗಿ, ಧಾವತಿ—ಓಡುತ್ತದೆ.

**ಗಾಹೆ ॥** ಏಗೋಇಯ—ಒಬ್ಬನೇ ಎಂದರೆ ಅಸಹಾಯನಾಗಿ, ಜೀವೋ—ಜೀವನು, ಮರದಿ—ಶರೀರತ್ಯಾಗವನ್ನು ಮಾಡುತ್ತಾನೆ; ಏಗೋಇಯ—ಒಬ್ಬನೇ. ಉವವಜ್ಜ ಇ—ಹುಟ್ಟುತ್ತಾನೆ; ಏಗೋ ಸಹಾಇ ಮರಣಂ—ಒಬ್ಬನ ಮರಣವು ಹತ್ತಿರ ಬರುತ್ತದೆ, ಏಗೋ ಸಹಾಇ ಣಿರಯಂ ವಾ —ಒಬ್ಬನೇ ನರಕಕ್ಕೆ ಹೋಗುತ್ತಾನೆ; ಇದಕ್ಕೆ ಏಕೋ ಸಿಜ್ಝಇ ಣೀರಓ—ಏಕಃ ಸಿಧ್ಯತಿ ಣೀರಓ ಎಂಬ ಪಾಠಾಂತರವಿದೆ—ಒಬ್ಬನು ನೀರಜನಾಗಿ ಎಂದರೆ ಕರ್ಮರಹಿತನಾಗಿ ಮುಕ್ತನಾಗುತ್ತಾನೆ ಎಂದರ್ಥ.

**೧೮೬. ಶ್ಲೋಕ ॥** ಕಸ್ಯ ಮಾತಾ—ಯಾರ ತಾಯಿ. ಕಸ್ಯ ಪಿತಾ—ಯಾರ ತಂದೆ. ಕಸ್ಯ ಭಾರ್ಯಾ —ಯಾರ ಹೆಂಡತಿ. ಅಪಿ ವಾ—ಮತ್ತೆ, ಕಸ್ಯ—ಯಾರ. ಸುತಃ—ಮಗನು ; ಜೀವಾನಾಂ— ಜೀವಿಗಳ. ಜಾತೌ ಜಾತೌ—ಜನ್ಮಜನ್ಮದಲ್ಲಿ. ಪರೇ ಪರೇ—ಬೇರೆಬೇರೆಯಾದವರು. ಭವಿಷ್ಯಂತಿ ಹಿ—ಆಗುವರಲ್ಲವೆ ?

**ಶ್ಲೋಕ ॥** ಅರ್ಥಾಃ—ದ್ರವ್ಯಗಳು. ಗೃಹೇಷು—ಮನೆಗಳಲ್ಲಿ. ತಿಷ್ಠನ್ತಿ—ನಿಲ್ಲುತ್ತವೆ; ಬಾಂಧವಾಃ—ಬಂಧುಗಳು. ಶ್ಮಶಾನೇಷು ಚ—ಶ್ಮಶಾನದಲ್ಲಿ ನಿಲ್ಲುತ್ತಾರೆ; ಶರೀರಃ—ದೇಹವು. ಜ್ವಾಲಮಾಲಾಗ್ನೌ—ಉರಿಯ ಮಾಲೆಯಲ್ಲಿ ನಿಲ್ಲುತ್ತದೆ. ಸುಕೃತಂ—ಪುಣ್ಯವೂ. ದುಷ್ಕೃತಂ —ಪಾಪವೂ. ವ್ರಜೇತ್—ಬರುತ್ತದೆ ಜೊತೆಯಲ್ಲಿ. ೯. ಪಂದರಂ—ಚಪ್ಪರವನ್ನು ; ೧೦. ನೇತ್ರ ಪಟ್ಟೆಯ—ನೇತ್ರವೆಂಬ ಬಟ್ಟೆಯ. ಉಲ್ಲಾವಂಗಳುಮಂ—ವಿತಾನಗಳನ್ನೂ ಮೇಲ್ಕಟ್ಟುಗಳನ್ನೂ ; ೧೧. ಮೂಱು ಪೊೞ್ತುಂ—ಮೂರುಹೊತ್ತೂ ; ೧೨. ಪೊಡೆಮಡುತ್ತಿರೆ—ನಮಸ್ಕಾರ ಮಾಡುತ್ತಿರಲು : ಆರಾಧನೆಯನರ್ಚಿಸಿ—ಆರಾಧನಾ ಎಂಬ ಗ್ರಂಥವನ್ನು ಪೂಜೆಮಾಡಿ. ವಕ್ಕಾಣಿಸಲ್— ವಿಸ್ತಾರವಾಗಿ ಹೇಳಲು, ವ್ಯಾಖ್ಯಾನಿಸಲು. ತಗುಳ್ದರ್—ತೊಡಗಿದರು.

**ಶ್ಲೋಕ ॥** ಕಂಠಗತೈಃ—ಗಂಟಲಿಗೆ ಬಂದ. ಪ್ರಾಣೈರಪಿ—ಪ್ರಾಣಗಳಿಂದಲೂ. ಯಃ— ಯಾವನು. ಸಂನ್ಯಸನೇ—ಸಂನ್ಯಾಸದಲ್ಲಿ. ಅಸ್ತಿ ಮತಿಃ—ಮನಸ್ಸುಳ್ಳವನಾಗಿರುವನೋ. ಸಃ— ಅವನು. ಪುನರಾಗಮವರ್ಜಿತಂ—ಹಿಂದಿರುಗಿ ಬರುವುದೇ ಇಲ್ಲದ. ಮೋಕ್ಷಸದನಂ—ಮೋಕ್ಷವೆಂಬ ಮನೆಗೆ, ಗಚ್ಛೇತ್—ಹೋಗುತ್ತಾನೆ.

ಇಹಜೀವಕೃತಂ ಪಾಪಂ—ಈ ಜನ್ಮದಲ್ಲಿ ಮಾಡಿದ ಪಾಪ, ಪುರಾಕೃತಂ—ಹಿಂದೆ ಮಾಡಿದ. ಪಾಪಂ—ಪಾಪವು. ಯಚ್ಚ—ಯಾವುದೋ, ತತ್ಸರ್ವಂ—ಆ ಸಕಲ ಪಾಪಗಳೂ. ಅಗ್ನಿಃ— ಉರಿಯು. ಇಂಧನಾನಿ—ಸೌದೆಯನ್ನು ಹೇಗೋ ಹಾಗೆ. ಸಂನ್ಯಸನೇನ—ಸಂನ್ಯಾಸದಿಂದ. ದಹತಿ—ಸುಡುತ್ತದೆ.

ಹೃದಯೇ—ಹೃದಯದಲ್ಲೂ. ಲಲಾಟೇ—ಹಣೆಯಲ್ಲೂ ಎಂದರೆ ಹುಬ್ಬಿನ ನಡುವೆಯೂ. [illegible]—ಅಕ್ಷತವನ್ನೂ. ಕರಂ—ಕೈಯನ್ನೂ. ಮುಮೂರ್ಷುಕಾಲೇ—ಬಿಡುವ [illegible] [illegible]. ನ್ಯಸ್ಯ—ಇಟ್ಟುಕೊಂಡು. ಸಮಾಶ್ರಿತಸ್ಯ—ನಮ್ರತೆಯಿಂದ ಹಿಡಿದವನ. ಅಜ್ಞಾನ ಭಾವಾತ್—ಅಜ್ಞಾನತೆಯ ವಶದಿಂದ. ಕೃತ—ಮಾಡಲ್ಪಟ್ಟ, ಕರ್ಮಭಾರ—ಪುಣ್ಯಪಾಪ ರೂಪವಾದ ಕರ್ಮಗಳ ಭಾರವು. ಸಂನ್ಯಸನಾತ್—ಸಂನ್ಯಾಸದಿಂದ. ನಷ್ಟಭಯಂ—[illegible] ವಿನಾಶವನ್ನು, ಪ್ರಯಾತಿ—ಪಡೆಯುತ್ತದೆ.

**ಗಾಹೆ॥** ಉಡ್ಢಂ—ಊರ್ಧ್ವಲೋಕದಲ್ಲಿ, ಅಧೋ—ನರಕಭವನ ವ್ಯಂತರ ಜ್ಯೋತಿಷ್ಕ ಲೋಕಗಳಲ್ಲಿ, ತಿರಿಯಮ್ಮಿ ಯ—ಏಕೇಂದ್ರಿಯಾದಿಜೀವಜಾತಿಗಳಲ್ಲಿ, ಕದಾಣಿ—ಮಾಡಲ್ಪಟ್ಟ, ಪ್ರಾಪ್ತವಾದ. ಬಾಲಮರಣಾನಿ—ಬಾಲಮರಣಗಳು, ಬಹುಗಾಣಿ—ಬಹುವಾಗಿವೆ; ದಂಸಣಣಾಣ ಸಹ್ಣಗದೋ—ದರ್ಶನಜ್ಞಾನಗಳು ಸಹವಾಗಿ ಪ್ರಾಪ್ತವಾಗಿರುವ, ಪಂಡಿಯ ಮರಣಂ—ಪಂಡಿತ ಮರಣವನ್ನು, ಎಂದರೆ ಶುದ್ಧ ಪರಿಣಾಮ ಚಾರಿತ್ರಪೂರ್ವಕವಾದ ಪ್ರಾಣತ್ಯಾಗವನ್ನು, ಅಣುಮರಿಸ್ಸೇ—ಸ್ವೀಕರಿಸುತ್ತೇನೆ, ಮಾಡುತ್ತೇನೆ; ಸ್ವರ್ಗ ನರಕ ಪ್ರಾಣಿಲೋಕಗಳಲ್ಲಿ ಅನೇಕವಾಗಿ ಬಾಲಮರಣಗಳನ್ನು ಪಡೆದಿದ್ದೇನೆ, ಇನ್ನುಮೇಲೆ ಸಮ್ಯಗ್ದರ್ಶನ ಜ್ಞಾನಗಳಿಂದ ಕೂಡಿದ ಪಂಡಿತ ಮರಣವನ್ನು ಪಡೆಯುತ್ತೇನೆ ಎಂದು ತಾತ್ಪರ್ಯ.

ಉವ್ವೇಯ ಮರಣಂ—ಉದ್ವೇಗಯುಕ್ತವಾದ ಮರಣವು ಎಂದರೆ ಇಷ್ಟವಿಯೋಗ ಅನಿಷ್ಟ ಸಂಯೋಗಗಳಿಂದ ಆಗುವ ತ್ರಾಸದಿಂದ ಕೂಡಿದ ಮರಣವು; ಜಾದೀ ಮರಣಂ—ಜಾತಿಮರಣವು ಎಂದರೆ ಹುಟ್ಟುವಾಗಲೇ ಗರ್ಭದಲ್ಲಿ ಸಾಯುವುದು; ಣಿರಯೇಸು—ನರಕಗಳಲ್ಲಿ; ವೇದಣಾಓ ಯ—ನೋವೂ ಹಿಂಸೆಯೂ; ಏದಾಣಿ—ಇವುಗಳನ್ನು. ಸಂಭರಂತೋ—ಚೆನ್ನಾಗಿ ಸ್ಮರಿಸಿಕೊಳ್ಳುತ್ತ, ಪಂಡಿಯ ಮರಣಂ—ಪಂಡಿತ ಮರಣವನ್ನು. ಅಣುಮರಿಸ್ಸೇ—ಸಾಯುತ್ತೇನೆ, ಪ್ರಾಣತ್ಯಾಗ ಮಾಡುವೆನು.

ಏಕ್ಕಂ—ಒಂದು. ಪಂಡಿಯ ಮರಣಂ—ಪಂಡಿತ ಮರಣವು, ಜಾಈಸದಾಣಿ—ನೂರು ಜನ್ಮಗಳನ್ನು. ಬಹೂಣಿ—ಅನೇಕವಾದವುಗಳನ್ನು. ಛಿಂದಇ—ಕತ್ತರಿಸುತ್ತದೆ, ನಾಶಗೊಳಿಸುತ್ತದೆ. ಜೇಣ—ಯಾವುದರಿಂದ. ಮದಂ—ಸಾವು, ಸಮ್ಮದಂ—ಒಳ್ಳೆಯ ಮರಣವು. ಹೋಇ—ಆಗುತ್ತದೆ; ತಂ ಮರಣಂ—ಆ ಮರಣವು. ಮರಿದವ್ವಂ—ಪ್ರಾಪ್ತವ್ಯವಾದ ಎಂದರೆ ಪಡೆಯಬೇಕಾದ ಮರಣವು.

ದುಃಖಂ—ದುಃಖವು. ಜದಿ—ಯಾವಾಗ. ಉಪ್ಪಜ್ಜಇ—ಹುಟ್ಟುತ್ತದೋ. ತೋ = ತತಃ—ಆಮೇಲೆ, ಣಿರಯೇ—ನರಕದಲ್ಲಿ. ಸಭಾವದೋ—ಸ್ವಾಭಾವಿಕತೆಯನ್ನು, ಸ್ವರೂಪವನ್ನು, ದಟ್ಠವ್ವೋ—ನೋಡುವುದಾಗುತ್ತದೆ. ಸಂಸಾರೇ—ಸಂಸಾರದಲ್ಲಿ ಎಂದರೆ ಜಾತಿ ಜರಾಮರಣವುಳ್ಳುದರಲ್ಲಿ. ಸಂಸರಂತೇಣ—ತಿರುಗುತ್ತಿರುವ; ಸುತ್ತುತ್ತಿರುವ; ಮಯ—ನನ್ನಿಂದ, ಕದಮಂ ಣ ಪತ್ತಂ—ಏಕೆ ಪ್ರಾಪ್ತವಾಗುವುದಿಲ್ಲ ಎಂದರೆ ಪ್ರಾಪ್ತವಾಗಿಯೇ ಆಗುತ್ತದೆ; ಸಂನ್ಯಾಸಕಾಲದಲ್ಲಿ ಉತ್ಪನ್ನವಾಗುವ ಹಸಿವು ಮೊದಲಾದ ಹಿಂಸೆಗಳು ನರಕ ದುಃಖದ ಸ್ವಭಾವವನ್ನು ತೋರಿಸುತ್ತವೆ. ಹೀಗಿರುವಾಗ ಸಂಸಾರದಲ್ಲಿ ತೊಳಲುತ್ತಿರುವ ನನಗೆ ದುಃಖವು ಬಾರದಿರುವುದೇ? ಬಂದೇ ಬರುತ್ತದೆ ಎಂದು ಚಿಂತಿಸಬೇಕು—ಎಂದು ತಾತ್ಪರ್ಯ.

**೧೮೭.** ಸಂಸಾರ ಚಕ್ಕವಾಳಮ್ಮಿ—ಚತುರ್ಗತಿಗಳ ಜನ್ಮಜರಾಮರಣಗಳೆಂಬ ಸುಳಿಯಲ್ಲಿ, ಮಏ—ನನ್ನಿಂದ. ಸವ್ವೇವಿ—ಸಕಲ. ಪುಗ್ಗಲಾ—ಪುದ್ಗಲಗಳು ಎಂದರೆ ಮೊಸರು ಸಕ್ಕರೆ ಬೆಲ್ಲ ಅನ್ನ ನೀರು ಮುಂತಾದ ದ್ರವ್ಯಗಳು. ಬಹುಸೋ—ಅನೇಕ ಬಾರಿ. ಆಹಾರಿದಾಯ—ಗೃಹೀತವಾಗಿವೆ. ಎಂದರೆ ತಿನ್ನಲ್ಪಟ್ಟಿವೆ; ಪರಿಣಾಮಿದಾಯ—ಜೀರ್ಣಿಸಲ್ಪಟ್ಟವೆ ಎಂದರೆ ಮಲಮೂತ್ರಾದಿ ದುಷ್ಟವಸ್ತುಗಳಾಗಿ ಪರಿಣಮಿಸಿ ಹೊರಕ್ಕೆ ಹೋಗಿವೆ; ಆಸೆ ಹೆಚ್ಚಾಯಿತು; ಸಂಸಾರಚಕ್ರದಲ್ಲಿ ಸುತ್ತುತ್ತಿರುವ ನಾನು ಎಷ್ಟೋ ಸಲ ಅನೇಕ ಭೋಗ್ಯವಸ್ತುಗಳನ್ನು ತಿಂದಿದ್ದೇನೆ. ಜೀರ್ಣಿಸಿಕೊಂಡಿದ್ದೇನೆ, ಆಸೆ ಹೋಗಲಿಲ್ಲ. ತೃಪ್ತಿ ಆಗಲಿಲ್ಲ ಎಂದು ಚಿಂತಿಸತಕ್ಕದ್ದು—ಇದು ತಾತ್ಪರ್ಯ.

ಆಹಾರಣಿಮಿತ್ತಂ—ಆಹಾರವು ಕಾರಣವಾಗಿ. ಮಚ್ಛಾ—ಮೀನುಗಳು. ಸತ್ತಮಿಂ—ಏಳನೆಯ, ಪುಢವಿಂ—ಪೃಥ್ವಿಯನ್ನು ಎಂದರೆ ಅವಧಿಸ್ಥಾನವನ್ನು. ಗಚ್ಛಂತಿ—ಹೋಗುತ್ತವೆ. ಪ್ರವೇಶಿಸುತ್ತವೆ ಅಲ್ಲವೆ; ಸಚ್ಚಿತ್ತೋ—ಚೇತನದಿಂದ ಕೂಡಿದ. ಆಹಾರೋ—ಭೋಜನವು ಎಂದರೆ ಪ್ರಾಣಿಹಿಂಸೆಯಿಂದ ಬಂದ ಅಯೋಗ್ಯಾಹಾರವು. ಮಣಸಾವಿ—ಮನಸ್ಸಿನಲ್ಲಿಯಾದರೂ. ಪತ್ಥೇದುಂ—ಬೇಡಲು. ಣಕಲ್ಪದಿ—ಯೋಗ್ಯವಾಗುವುದಿಲ್ಲ.

ತ್ರುಣಕಟ್ಠೇಹಿ ವ—ತೃಣಕಾಷ್ಠಗಳಿಂದ ಹೇಗೆ, ಅಗ್ನಿಃ—ಉರಿಯು ತೃಪ್ತವಾಗುವುದಿಲ್ಲವೋ, ಲವಣಸಮುದ್ದೋ—ಉಪ್ಪುಗಡಲು, ಣದೀಸಹಸ್ಸೇಹಿಂ—ಹೇಗೆ ಸಾವಿರಾರು ನದಿಗಳಿಂದ ತುಂಬು ವುದಿಲ್ಲವೋ. ಹಾಗೆ, ಇಮೋ ಜೀವ್ರೋ—ಈ ಜೀವನು. ಕಾಮಭೋಗೇಹಿಂ—ಬಯಸಲ್ಪಟ್ಟ ಸ್ತ್ರೀವಸ್ತ್ರಾದಿ ಭೋಗವಸ್ತುಗಳಿಂದ. ತಪ್ಪೇದುಂ—ತೃಪ್ತಿಪಡಿಸಲು, ಣ ಸಕ್ಕೋ—ಸಾಧ್ಯವಾಗ ದವನು.

ಜಹಜಹ—ಹೇಗೆಹೇಗೆ, ಭೋಗೇ—ಭೋಗಗಳು. ಭುಂಜಇ—ಭೋಗಿಸಲ್ಪಡುವುದೋ. ತಹತಹ —ಹಾಗೆಹಾಗೆ, ಭೋಗೇಸು—ಸುಖಗಳಲ್ಲಿ. ತಣ್ಹಾ—ಆಸೆಯು, ವಡ್ಢದೇ—ವರ್ಧಿಸುತ್ತದೆ. ಇಂಧಣಾಇಂ—ಸೌದೆಗಳಿಂದ. ಅಗ್ಗೀವ—ಅಗ್ನಿಯಂತೆ ; ಸೇ ಭೋಗಾ—ಆ ಭೋಗಗಳು, ತಣ್ಹಂ —ತೃಷ್ಣೆಯನ್ನು, ಆಸೆಯನ್ನು. ದೀವಂತಿ—ಉದ್ದೀಪನಗೊಳಿಸುತ್ತವೆ.

**ವೃ ॥** ಸಲವಣರಸಮಂಭಃ—ಉಪ್ಪಿನ ರಸದಿಂದ ಕೂಡಿದ ನೀರು ಎಂದರೆ ಉಪ್ಪುನೀರು, ತೃಷಾರ್ತೈಃ—ಬಾಯಾರಿಕೆಯಿಂದ ಪೀಡಿಸಲ್ಪಟ್ಟವರಿಂದ, ಭುಜ್ಯಮಾನಂ—ಸೇವಿಸಲ್ಪಟ್ಟುದಾದರೆ. ಅಧಿಕತರ ತೃಷಾರ್ತಾನ್—ಅತಿಶಯವಾದ ನೀರಡಿಕೆಯಿಂದ ಹಿಂಸಿಸಲ್ಪಟ್ಟವರನ್ನಾಗಿಯೋ. ದುಃಖಿ ತಾನ್ ಏವ—ದುಃಖಿಗಳನ್ನಾಗಿಯೋ. ಕುರ್ಯಾತ್—ಮಾಡುತ್ತವೆ; ಇದಂ—ಈ. ವಿಷಯ ಸುಖಮಪಿ—ಇಂದ್ರಿಯಸುಖವು ಕೂಡ. ತೃಷಾರ್ತೈಃ—ಆಸೆಯುಳ್ಳವರಿಂದ. ಭುಜ್ಯಮಾನಂ— ಸೇವಿಸಲ್ಪಟ್ಟದ್ದು. ಅಧಿಕತರ ತೃಷಾರ್ತಾನ್. ದುಃಖಿತಾನ್ ಏವ—ಅತಿಶಯತರವಾದ ಆಶೆಯಿಂದ ಹಿಂಸಿಸಲ್ಪಟ್ಟವರನ್ನಾಗಿಯೋ. ದುಃಖಿತರನ್ನಾಗಿಯೋ. ಕುರ್ಯಾತ್—ಮಾಡುತ್ತದೆ.

**ಆರ್ಯೆ ॥** ಪುಟ ೧೫೭ ನೋಡಿ.

**ವೃ ॥** ಮದ್ದುಂ—ಮದ್ದೂ, ಮಂತ್ರಮುಂ—ಮಂತ್ರಗಳೂ. ಇಷ್ಟದೇವತೆಗಳುಂ—ಉಪಾಸ್ಯ ದೇವತೆಗಳೂ, ದಿವ್ಯಾಸ್ತ್ರಮುಂ—ಶ್ರೇಷ್ಠವಾದ ಬಾಣಗಳೂ. ಕೋಂಟೆಯುಂ—ಕೋಟೆಯೂ. ಗುದ್ದುಂ—ಗುದ್ದೂ, ಪೊರ್ದಿದ—ಸೇರಿದ, ಚಾತುರಂಗ ಬಲಮುಂ—ಚತುರಂಗ ಸೈನ್ಯವೂ. ಮೆಯ್ಗಾವಂ—ಅಂಗರಕ್ಷಕರೂ, ಪೇಳಿಗೊಂಡಿರ್ದ—ರಾಜನು ಸಾಯುತ್ತಲೇ ತಾವೂ ಸಾಯುತ್ತೇ ವೆಂಬ ಸಮಯಪಾಲನ ಪ್ರತಿಜ್ಞೆಯನ್ನು ತಾಳಿದ. ಆ ಅತ್ಯುಗ್ರ ಭಟರ್ಕಳುಂ—ಆ ಅತಿಭಯಂಕರ ರಾದ ಯೋಧರೂ. ಕವಚಮುಂ—ದೇಹವನ್ನು ರಕ್ಷಿಸುವ ಕವಚವೂ. ಮಿತ್ರರ್ಕಳುಂ—ಸ್ನೇಹಿತರೂ. ಮಿಟ್ಟು—ಮೃತ್ಯುವು, ಮೇಲೆರ್ದಾಗಳ್—ಮೇಲೆ ಹಾಯ್ದು ಬಂದಾಗ. ಶರಣಪ್ಪುವೆ—ಶರಣಾಗು ವುದಾದರೆ. ಪನ್ನಿರ್ವರುಂ ಚಕ್ರಿಗಳ್—ಹನ್ನೆರಡು ಜನ ಚಕ್ರವರ್ತಿಗಳು. ಏಕೆ ಸತ್ತರ್—ಏಕೆ ಸತ್ತರು ?

ಸಾವನಿತು—ಸಾಯುವಷ್ಟು, ಒಂದು ಅವಸ್ಥೆ—ಒಂದು ಸ್ಥಿತಿ, ತನಗೆ ಆದ ಎಡೆಯೊಳ್—ತನಗೆ ಉಂಟಾದ ಸಮಯದಲ್ಲಿ. ತಳಿಸಂದು—ನಿಶ್ಚಯಿಸಿ, ತತ್ತ್ವಮುಂ—ಜಿನತತ್ತ್ವಮಂ. ಭಾವಿಸಿ— ಧ್ಯಾನಿಸಿ. ಬಾಹ್ಯ ವಸ್ತುಗಳೊಳ್—ಹೊರಗಣ ಪದಾರ್ಥಗಳಲ್ಲಿ. ಬಂದಪ್ಪೆ—ಸೇರದೆ. ತನ್ನೊಳೆ— ತನ್ನೊಳಗೇ, ನಿಂದು—ನಿಂತು ಎಂದರೆ ಮನವನ್ನು ನಿಲ್ಲಿಸಿ, ಕರ್ಮ ವಿಸ್ರಾವಣೆಯಿಂ—ಕರ್ಮವು ಕಳಚಿ ಹೋಗುವುದರಿಂದ, ವಿಶೋಧಿ—ನಿರ್ಮಲತ್ವವು. ದೊರೆಕೊಂಡಿರೆ—ಲಭ್ಯವಾಗಿರಲು. ಪರೀಷಹಂಗಳುಂ—ಶೀತವಾತ ಮುಂತಾದ ಇಪ್ಪತ್ತೆರಡು ಹಿಂಸೆಗಳನ್ನು. ಗೆಲ್ದು—ಗೆದ್ದು, ಜೀವಮಂ —ಪ್ರಾಣವನ್ನು, ಸಂತಂ—ಸಮಾಧಾನವಾಗಿ. ಇಂತು—ಹೀಗೆ. ಒಡಲಿಂ—ದೇಹದಿಂದ. ಕಳೆಗೆ— ಕಳೆಯಲಿ. ಎಂಬುದು—ಎಂದು ಹೇಳುವುದು, ಜೈನಶಾಸನಂ—ಜೈನ ಧರ್ಮವು.

ಆರೊಳಂ—ಯಾರಲ್ಲೂ, ಎನಗೆ—ನನಗೆ. ಮೋಹಂ—ಪ್ರೀತಿಯು, ಇಲ್ಲ. ಎನ್ಗೆ—ಎನ್ನಲಿ : ಜಿನೇಂದ್ರ ಪದಂಗಳ್—ಅರ್ಹಂತನ ಪಾದಗಳು. ಉಗ್ರಸಂಸಾರ ಪದಂಗಳ್—ಭೀಕರವಾದ ಜನನ ಮರಣಗಳನ್ನು ಪರಿಹರಿಸುವುವು. ಎನ್ಗೆ—ಎನ್ನಲಿ. ಎನಗೆ—ನನಗೆ, ಎನ್ನ—ನನ್ನ. ಅಜ್ಞಿಪಲ್ಲದೆ— ಜ್ಞಾನವಲ್ಲದೆ. ಪೆಱತು ಇಲ್ಲ—ಬೇರೆ ಇಲ್ಲ. ಎನ್ಗೆ—ಎನ್ನಲಿ; ಇಂದು ಅರಯೆ—ನಿಂತು ವಿಚಾರ ಮಾಡಿದರೆ. ಧರ್ಮವೊಂದೆ—ಧರ್ಮವೊಂದೇ. ಶರಣ್—ಶರಣು. ಎನ್ಗೆ—ಹೇಳಲಿ. ಪಲಾಲದುಂ—

ಜೊಳ್ಳನ್ನು ಎಂದರೆ ನಿಸ್ಸಾರವಾದುದನ್ನು. ಒಲ್ದೆನ್—ಒಪ್ಪೆನು. ಇಂ—ಇನ್ನು. ಜೀವಿತಾಂತ್ಯದೊಳ್—ಜೀವನದ ಕೊನೆಗಾಲದಲ್ಲಿ. ಎನಲಾರ್ಪೊಡೆ—ಹೇಳಲು ಶಕ್ತಿಯಿದ್ದರೆ. ನಮಸ್ಕಾರಮೆ—ಪಂಚಪರಮೇಷ್ಠಿಗಳ ನಮಸ್ಕಾರವೇ. ಸಾಲ್ಗುಂ—ಸಾಕು. ಎಂಬ—ಎನ್ನುವ. ಇನಿತಂ—ಇಷ್ಟನ್ನು. ಎನ್ಗೆ—ಹೇಳಲಿ.

**ಗಾಹೆ ॥** ಇಣಂ ಜಿಣವಯಣಂ ಓಸಹಂ—ಈ ಜಿನನ ಉಪದೇಶವು ಓಷಧ; ವಿಸಯಸುಹ ವಿರೇಯಣಂ—ವಸ್ತುಗಳಿಂದಾಗುವ ಸುಖಗಳಿಗೆ ವಿರೇಚನ ದ್ರವ್ಯವಾಗಿದೆ; ಅಮಿದ ಭೂತಂ—ಅಮೃತಸ್ವರೂಪವಾಗಿದೆ; ಸವ್ವಜೀವಾಣಂ—ಎಲ್ಲ ಜೀವಗಳ; ಜರಮರಜಮ್ಮವೇಯಣ—ಮುಪ್ಪು, ಸಾವು, ಹುಟ್ಟು, ರೋಗ ಬೇನೆಗಳನ್ನು. ಖಯಕರಣಂ—ಕ್ಷಯಮಾಡುವುದಾಗಿವೆ, ನಾಶಕರವಾಗಿದೆ.

**೧೮೮. ಗಾಹೆ ॥** ಏಕ್ಕವಿ—ಒಂದೇ ಆದ, ಭವಗ್ಗಹಣೇ—ಜನ್ಮಧಾರಣೆಯಲ್ಲಿ. ಸಮಾಹಿಮರಣಂ—ಸಮಾಧಿಮರಣವೆಂಬ ಮರಣವನ್ನು; ಜೀವೋ—ಜೀವನು. ಆತ್ಮನು; ಮರಿಲಹಿಜ್ಜ—ಯಾವಾಗ ಪಡೆಯುವನೋ ಅದರ ಅನಂತರದ. ಸತ್ತಟ್ಠ ಭವಗ್ಗಹಣೇ—ಏಳೆಂಟು ಜನ್ಮಧಾರಣೆಗಳಲ್ಲಿ, ಅಣುತ್ತರಂ—ಅತ್ಯಂತ ಶ್ರೇಷ್ಠವಾದ ಣಿವ್ವಾಣಂ—ನಿರ್ವಾಣವನ್ನು, ಮೋಕ್ಷವನ್ನು. ಲಹಇ—ಪಡೆಯುತ್ತಾನೆ.

***ಗಾಹೆ ॥** ಸತ್ತಕ್ಖರ—ಸಪ್ತಾಕ್ಷರಗಳ ಎಂದರೆ ಣಮೊ ಅರಹಂತಾಣಂ ಎಂಬುದರ, ಸಜ್ಝಯಂ—ಪಠಣವನ್ನು, ತಿಭಾವೇಣ—ಕಾಯಾ ವಾಚಾ ಮನಸಾ ಎಂಬ ಮೂರು ಭಾವಗಳಿಂದ. ಅಣ್ಣಮಣೋ—ಅನ್ಯಮತಿಯಾದ. ಜೋ—ಯಾವನು. ಕುಣಇ—ಮಾಡುವನೋ, ಸೋ—ಅವನು. ಸವ್ವಕಲ್ಲಾಣಂ—ಸಮಸ್ತ ಕಲ್ಯಾಣಗಳನ್ನು. ಪಾವಇ—ಪಡೆಯುತ್ತಾನೆ.

**ಗಾಹೆ ॥** ಸವ್ವ ಪಾವ ಪಣಾಸಣೋ—ಸಮಸ್ತ ಪಾಪಗಳನ್ನು ನಾಶಮಾಡುವ, ಏಸೋ—ಈ. ಪಂಚಣಮೋಕ್ಕಾರೋ—ಪಂಚನಮಸ್ಕಾರಗಳು. ಸವ್ವೇಸು—ಎಲ್ಲ, ಮಂಗಳೇಸು ಯ—ಮಂಗಳಗಳಲ್ಲಿ. ಪಢಮಂ—ಮೊದಲಿನವನಾದ, ಮಂಗಳಂ—ಮಂಗಳವು, ಹವಇ—ಆಗುತ್ತದೆ.

***ಗಾಹೆ ॥** ಜೋ—ಯಾವನು. ಭಾವಣಮೋಕ್ಕಾರಗದೋ—ಮನಸ್ಸಿನಲ್ಲೇ ಧ್ಯಾನಿಸುವ ಪಂಚನಮಸ್ಕಾರಗಳನ್ನುಳ್ಳವನು. ಣಿಯಮಿಯವ್ವಿ—ನಿಯಮಿತವಾದ. ಚಿತ್ತವ್ವಿ—ಮನಸ್ಸಿನಲ್ಲಿ. ಝಾಯಂ—ಧ್ಯಾನಿಸುತ್ತ. ಏಕಗ್ಗೇಣ ಏಕಾಗ್ರತೆಯಿಂದ. ವಿಸುದ್ಧೋ—ನಿರ್ಮಲನೋ. ಸೋ—ಅವನು. ಮೊಕ್ಕಸುಹಭಾಈ—ಮೋಕ್ಷಸುಖಭಾಗಿಯಾಗಿ, ಹೋಹಿಸಿ—ಆಗುವನು.

**ಆರ್ಯೆ ॥** ಗುರುಮೂಲೇ—ಗುರುಗಳ ಸಾನ್ನಿಧ್ಯದಲ್ಲಿ, ಯತಿನಿಕಟೇ—ಯತಿಗಳ ಸಮೀಪದಲ್ಲಿ. ಚೈತ್ಯೇ—ಜಿನಾಲಯದಲ್ಲಿ. ಸಿದ್ಧಾಂತವಾರ್ಧಿ ಸದ್ಘೋಷೇ—ಸಿದ್ಧಾಂತವೆಂಬ ಸಮುದ್ರದ ಉತ್ತಮನಾದದಲ್ಲಿ. ಜನ್ಮಜನ್ಮನಿ—ಜನ್ಮದಲ್ಲೂ, ಸಂನ್ಯಸನ ಸಮನ್ವಿತಂ ಮರಣಂ—ಸಂನ್ಯಾಸ ಸಮೇತವಾದ ಮರಣವು, ಮಮ—ನನಗೆ, ಭವತು—ಉಂಟಾಗಲಿ.

೧೧. ಆರಾಧನೆಯಂ—ಆರಾಧನಾ ಶಾಸ್ತ್ರವನ್ನು; ೧೨. ಮುಡಿಪುವಾಗಳ್—ಸಾಯುವಾಗ; ೧೩. ಭುವನವಾಸಿಗಲೋಕದೊಳ್—ಮನೆಗಳಲ್ಲಿ ವಾಸಮಾಡುವವರಾದ ಅಸುರಾದಿ ಕುಮಾರರ ಲೋಕದಲ್ಲಿ; ೧೪. ನೂಱು ಪಳಿತೋಪಮಾಯುಷ್ಯಮನೊಡೆಯೊಂ—ನೂರು ಪಳಿತಗಳಿಗೆ ಸಮಾನವಾದ ಆಯುಸ್ಸುಳ್ಳವನು; ೧೯. ಪೊಲ್ಲಗತಿಯೊಳ್—ದುರ್ಗತಿಯಲ್ಲಿ; ೨೦. ತೊಱೆಯಲ್—ವಿರಕ್ತನಾಗಲು; ಬಾರಿಸಿ—ತಡೆದು: ಬಲ್ಲಾಳ್ತನದಿಂ—ಬಲಾತ್ಕಾರದಿಂದ; ೧೬. ಕಲ್ಪಿಸಿದಂ—ಕಲಿಸಿದನು.

**ವೃ ॥** ತೃಷ್ಣಾಂ—ಆಸೆಯನ್ನು. ಛಿಂದಿ—ಕತ್ತರಿಸು; ಕ್ಷಮಾಂ—ಕ್ಷಮೆಯನ್ನು. ಭಜ—ಭಜಿಸು; ಮದಂ—ಗರ್ವವನ್ನು, ತ್ಯಜ—ಬಿಡು, ಪಾಪೇ—ಪಾಪದಲ್ಲಿ. ರತಿಂ—ಪ್ರೀತಿಯನ್ನು, ಮಾ ಕೃಥಾಃ—ಮಾಡಬೇಡ. ಸತ್ಯಂ—ನಿಜವನ್ನು. ಬ್ರೂಹಿ—ಹೇಳು. ಸಾಧುಪದವೀಂ—ಸಾಧುಗಳ ಪದವಿಯನ್ನು. ಅನುಯಾಹಿ—ಅನುಸರಿಸಿ ಹೋಗು; ವಿದ್ವಜ್ಜನಂ—ವಿದ್ವಾಂಸರನ್ನು. ಸೇವಸ್ವ—ಸೇವೆ ಮಾಡು. ಮಾನ್ಯಾನ್—ಮಾನ್ಯರಾದವರನ್ನು. ಮಾನಯ—ಗೌರವಿಸು; ವಿದ್ವಿಷೋಽಪಿ—ಶತ್ರು

ಪ್ರಹಾರಗಳನ್ನೂ. ಸಹಂತಿ—ಸೈರಿಸುತ್ತಾರೆ. ಮಹಾರಿಸೀ—ಮಹಾಋಷಿಗಳು, ಣಯಕುಪ್ಪಂತಿ—ಕೋಪ ಮಾಡಿಕೊಳ್ಳುವುದಿಲ್ಲ; ಸಮಣಾ (ಸಾಮೂ)—ಸಾಧುಗಳು; ಖಮಣಗುಣ ವಿಜಾಣಕಾ—ಕ್ಷಮಾಗುಣವನ್ನು ಬಲ್ಲವರಾಗಿದ್ದಾರೆ; ಸಾಧುಗಳು ಸರ್ವಪ್ರಕಾರಗಳಿಂದಲೂ ಸಹನಶೀಲರಾಗಿದ್ದು ಎಂದಿಗೂ ಕೋಪವಶರಾಗರು ಎಂದು ತಾತ್ಪರ್ಯ.

**ಗಾಹೆ** ॥ ಇದರ ಪಾಠದಲ್ಲಿ ಕ್ಲೇಶಗಳಿರುವುದರಿಂದ ಅರ್ಥ ಸರಿಯಾಗಿ ಆಗುವುದಿಲ್ಲ.

**೧೯೮. ಗಾಹೆ** ॥ ಜೀವಿದ ಮರಣೇ—ಬದುಕಿನಲ್ಲೂ ಸಾವಿನಲ್ಲೂ, ಲಾಭಾಲಾಭೇ—ಇಷ್ಟದ ಪ್ರಾಪ್ತಿಯಲ್ಲೂ ಇಷ್ಟದ ಅಪ್ರಾಪ್ತಿಯಲ್ಲೂ, ಸಂಜೋಗ ವಿಪ್ಪಜೋಗೇ ಜ—ಇಷ್ಟಸಂಯೋಗದಲ್ಲೂ ಇಷ್ಟವಿಯೋಗದಲ್ಲೂ, ಬಂಧ್ವರಿ ಸುಖದುಃಖಾದಿಸು—ಸ್ವಜನರು ಮಿತ್ರರು ಶತ್ರುಗಳು ಇವರಿಗೆ ಸಂಬಂಧಿಸಿದ ಸುಖದುಃಖಾದಿಗಳಲ್ಲೂ, ಹಸಿವು ನೀರಡಿಕೆ ಶೀತೋಷ್ಣಾದಿಗಳಲ್ಲೂ, ಸಮದಾ—ಸಮತೆಯು ಎಂದರೆ ಚಿತ್ತಸಮಾಧಾನದಿಂದಿರುವುದು. ಸಾಮಾಯಿಗಂ ಣಾಮ—ಸಾಮಾಯಿಕ ಎಂಬ ಹೆಸರುಳ್ಳದ್ದು.

**ಗಾಹೆ** ॥ ಪುಟ ೯೨ ನೋಡಿ.

೫. ಬೆಂಟೆಯುಂ—ಹುಲ್ಲಿನ ಹಗ್ಗವನ್ನು; ೬. ನಖಾಗ್ರದಿಂ—ಕಾಲುಗುರ ತುದಿಯಿಂದ. ನೆತ್ತಿವರೆಗಂ—ನೆತ್ತಿಯವರೆಗೂ: ೭. ಕಿಚ್ಚಂ ತಗುಳ್ಚಿ—ಉರಿಯನ್ನು ಅಂಟಿಸಿ, ಹೊತ್ತಿಸಿ: ೮. ಏಕಜ್ವಾಲೆಯಾಗಿ—ಒಂದೇ ಉರಿಯಾಗಿ; ೧೨. ಚರಮಪಾಳಿ—ಕೊನೆಯ ಕರ್ಮಬಂಧ: ೧೪. ಕ್ಷೀಣಕಷಾಯನಾಗಿ—ನಾಶವಾದ ರಾಗದ್ವೇಷವುಳ್ಳವನಾಗಿ: ೧೭. ಅವಱೊಡನೆ—ಅವುಗಳೊಡನೆ ಎಂದರೆ ನಾಲ್ಕು ಕರ್ಮಗಳೊಡನೆ: ಅಘಾತಿಕರ್ಮಗಳೊಡನೆ; ೨೨. ಒಡೆಯರಾದರ್—ಉಳ್ಳವರಾದರು; ೨೭. ಧನದಂ—ಕುಬೇರ.

**೧೯೯.** ೪. ಪಲ್ಯಂಕದೊಳ್—ಪದ್ಮಾಸನದಲ್ಲಿ.

***ಗಾಹೆ** ॥ ಇದರ ಪಾಠದಲ್ಲಿ ಕ್ಲೇಶಗಳಿರುವುದರಿಂದ ಸರಿಯಾಗಿ ಅರ್ಥವಾಗುವುದಿಲ್ಲ. ಸವ್ವೇಟಿ—ಸಕಲವೂ ಅದ. ಭವಣವಾಸೀ—ಭವನವಾಸಿಗಳೆಂಬ ದೇವತೆಗಳು. ವ್ಯಂತರ—ವ್ಯಂತರರು, ದೇವಾಯ—ದೇವತೆಗಳು, ಪಳಹ ಪಳುತಸಿಯಾ (?). ಪ್ರಂಟಿದ ಕಪ್ಪವಾಸೀ—ಕಲ್ಪವಾಸಿಗಳೂ, ಸಿಹಿಣಾ ಏಇ—ಜೋಹ ಇಸಿಯಾ—ಜ್ಯೋತಿಷ್ಕರು.

ತಾತ್ಪರ್ಯ: ಎಲ್ಲ ಭವನವಾಸಿ ಮತ್ತು ವ್ಯಂತರದೇವತೆಗಳು ಪಟಹಗಳ ಶಬ್ದದಿಂದ ಹೆದರಿದ್ದಾರೆ; ಕಲ್ಪವಾಸಿಗಳು ಗಂಟೆಗಳ ಶಬ್ದದಿಂದಲೂ ಜ್ಯೋತಿಷ್ಕದೇವತೆಗಳು ನವಿಲುಗಳ ಕೇಕೆಗಳಿಂದಲೂ ಹೆದರಿದ್ದಾರೆ.

೧೦. ಸಮವಸರಣ ಕೋಷ್ಠಂಗಳೊಳ್—ಸಮವಸರಣ ಎಂದರೆ ಜಿನನು ಉಪದೇಶ ಮಾಡುವ ಸಭಾಭವನದ ಪ್ರದೇಶಗಳಲ್ಲಿ; ೧೩. ಪೊಲ್ಲಕೆಯ್ದಂ—ಕೇಡನ್ನು ಮಾಡಿದೆನು; ೧೯. ಭವ್ಯವರ ಪುಂಡರೀಕರ್ಕಳ್ಗೆ—ಭವ್ಯರೆಂಬ ಶ್ರೇಷ್ಠವಾದ ತಾವರೆಗಳಿಗೆ; ೨೫. ಒರ್ಮೊದಲೆ—ಏಕಕಾಲದಲ್ಲಿ.

**೨೦೦. ಗಾಹೆ** ॥ ತೇ—ಮುಕ್ತರಾದವರು; ಅಜರಂ—ಮುಪ್ಪಿಲ್ಲದವರು; ಅರುಜಂ—ರೋಗವಿಲ್ಲದವರು; ಅಮರಂ—ಸಾವಿಲ್ಲದವರು; ಅಸರೀರಂ—ಔದಾರಿಕಾದಿ ಪಂಚಶರೀರವಿಲ್ಲದವರು; ಅಕ್ಷಯಂ—ಕ್ಷಯವಿಲ್ಲದವರು, ಅಣುವಮಂ—ಅಸದೃಶವಾದ, ಸೋಕ್ಖಂ—ಸುಖವುಳ್ಳವರು; ಅವ್ವಾಬಾಧಂ—ಯಾವ ತಡೆಯೂ ಇಲ್ಲದ, ಅಣಂತ ಅಣಾಗತಂ ಕಾಲಂ—ಅನಂತವಾದ ಭವಿಷ್ಯತ್ತಿನವರೆಗೂ. ಅಚ್ಛಂತಿ—ಮುಳುಗಿರುವವರು; ೪. ಊರನೆಯ್ದದೆ—ಊರಿಗೆ ಹೋಗದೆ; ಕುಮ್ಮರಿಯಂ—ತಾತ್ಕಾಲಿಕ ಬೇಸಾಯಕ್ಕಾಗಿ ಕಾಡನ್ನು ಕಡಿದು ನೆಲ ಬಿಡಿಸಿ ಆಮೇಲೆ ಸುಡುವುದು; ಒಟ್ಟಿದ ಮರಂಗಳ—ರಾಶಿ ಹಾಕಿದ ಮರಗಳ; ೯. ಪೋಡುಂಗಾಱು—ಕಾಡನ್ನು ಕತ್ತರಿಸುವವನು. ``ಒಂದೆ ಕುಠಾರದಿಂದಮಡವಿಯಂ ಕಡಿವಂತಿರೆ ಪೋಡುಗಾಱಂ'' (ಪಂಪರಾ. ೪-೪೦), ``ಮನುಜೇಂದ್ರನ ಸೇನೆಯ ವಿಘಟನಾಜಿಯೊಳ್ ಪೋಡುಗಾಱನಂತಿರೆ ತಱಿದಂ'' (ಅದೇ: ೫೬-೫೦೪) ಎಂದು ನಾಗಚಂದ್ರನ ಪ್ರಯೋಗಗಳಿವೆ; ತೂಂಕದಿಂದೆ—ನಿದ್ದೆಯಿಂದ. ೧೦. ಕಱ್ಱಂಗಳ್—ಕರ್ದಿಂಗಳ್—ಕಪ್ಪುಚಂದ್ರ, ಅಮಾವಾಸ್ಯೆಯ; ಕಡುಗತ್ತಲೆಯೊಳ್—ತೀವ್ರವಾದ ಕತ್ತಲೆ

ಯುಕ್ತಿ ; ೧೬. ಸಿಂಹೆಗರುಹದೆ—ನಿಂದನೆಗರ್ಹಣೆಗಳನ್ನು ; ೧೯. ಎಬ್ಬಿಟ್ಟಿ—ಎಬ್ಬಿಸಿ. ಓಡಿಸಿ ; ೨೪. ನೋಂಪಿಗಳಂ—ವ್ರತಗಳನ್ನು ; ಪಾರಿಸುವ—ಪಾರಣೆಮಾಡುವ ; ಪ್ರಾಸುಕಮಾಗುತ್ತಿರ್ದ—ಜೀವರಹಿತವಾಗಿದ್ದ, ನಿರ್ಮಲವಾದ ; ೫೭. ಕಾಟ್ಕಿಚ್ಚು ತಗುಳ್ದೊಡೆ—ಕಾಡಿನ ಕಿಚ್ಚು ಅಟ್ಟಿ ಬಂದರೆ.

**೨೦೧.** ೮. ಬಟ್ಟಿಬಂದು—ಕೆಳಕ್ಕೆ ಜಾರಿ ಬಂದು. "ಬಟಿಲ್ಚು—ಅಧಃಸ್ರಂಸನೇ" ; ೧೦. ಎಡೆಯನಪ್ಪಂ—ಒಡೆಯನಾಗಿದ್ದಾನೆ ; ೧೮. ಅರಿದೆಂದು—ಅಸಾಧ್ಯವೆಂದು ; ೧೯. ಪಾಂಗೆಲ್ಲಮಂ—ರೀತಿಯನ್ನೆಲ್ಲವನ್ನೂ ; ೨೬. ಪೇರಡವಿಗೆ—ದೊಡ್ಡ ಕಾಡಿಗೆ.

**೨೦೨.** ೧. ಆಟಿಸಿ—ಬಯಸಿ. ಪ್ರೀತಿಸಿ ; ೨. ಅವಲೋಕಿನೀ ವಿದ್ಯೆ—ದೂರದಲ್ಲಿ ನಡೆಯುವ ವಿದ್ಯಮಾನಗಳನ್ನು ತಿಳಿಸುವ ವಿದ್ಯೆ ; ೫. ಕೊಜೆದಿಕ್ಕಿ—ಕತ್ತರಿಸಿ ಹಾಕಿ ; ೭. ಅಗ್ಗಳದ ಸೂಳೆ—ಶ್ರೇಷ್ಠಳಾದ ದಾಸಿ ; ಕುಹೂದಿಂಗಳೊಳ್—ಅಮಾವಾಸ್ಯೆಯಲ್ಲಿ ; ೧೬. ಮಣಿಪೀಟಮಂ—ರತ್ನಖಚಿತವಾದ ಗುರಾಣಿಯನ್ನು ; ಸಾರ್ಚಿ—ಸೇರಿಸಿ ; ಕಿಟ್ಟಿಬಾಳ್ವೆರಸು—ಬರೆಯಿಂದ ಕಿತ್ತ ಕತ್ತಿಯೊಡನೆ ; ೧೫. ನೀನಾರ್ಗೆ—ನೀನು ಯಾರು ? ; ೨೩. ಪ್ರಸ್ತಾರಿಸಿ—ಪ್ರಸ್ತಾರ ಹಾಕಿ ; ತಿರ್ದಿ—ಸರಿಮಾಡಿ. ತಿದ್ದಿ.

**೨೦೩.** ೨. ಬೆಸಕೆಯ್ವೆಂ—ಸೇವೆಮಾಡುತ್ತೇನೆ ; ೯. ಸೋಂಕಿಲಂ—ಮಡಿಲನ್ನು ; ಉಡಿಯನ್ನು ; ೧೯. ನಿನಗೆ ಬಾಟ್ಟಿಯಾಪಂದು—ನಿನಗೆ ಬೇಕಾದಾಗ, ಕಾರ್ಯ ಒದಗಿದಾಗ ; ೨೦. ಆ ದೆಸೆಯತ್ತ—ಆ ದಿಕ್ಕಿನ ಕಡೆಗೆ ; ೨೬. ತಮ್ಮಿರ್ಪ್ಪೋವರಿಯೊಳಿರ್ದು—ತಾವು ಇರಬೇಕಾದ ಕೊಠಡಿಯಲ್ಲಿದ್ದು ; ೨೯. ಈ ಭವದಿಂ ತೊಟ್ಟು—ಈ ಜನ್ಮದಿಂದ ಹಿಡಿದು.

**೨೦೪.** ೧. ಪೊಟ್ತಿಡೆ—ಹೊತ್ತಾರೆ ; ೧೪. ಏಕಸ್ಥಿರಯೋಗಂಗೊಂಡು—ಏಕಾಕಿಯಾಗಿ ಚಲಿಸದೆ ನಿಂತು ತಪಸ್ಸು ಮಾಡುವುದನ್ನು ಸ್ವೀಕರಿಸಿ ; ಕಲ್ಮೆಲೆ ನಿಂದರ್—ಕಲ್ಲು ನಿಲ್ಲುವ ಹಾಗೆ ನಿಂತರು ; ೧೭. ಕರುಮಾಡದ—ಉಪ್ಪರಿಗೆಯ, ಸುಣ್ಣಬಣ್ಣ ಮಾಡಿದ ಮನೆಯ ; ೨೦. ಕೌಟಿಲ್ಯಭಾವದಿಂ—ಕುಟಿಲವಾದ ಮನಸ್ಸಿನಿಂದ ; ೨೧. ಮಹಾವಾತಂ—ದೊಡ್ಡ ವಾತರೋಗ ; ತಗುಳ್ದುದು—ಅಂಟಿಕೊಂಡಿತು ; ೨೨. ಮದ್ದೇನ್—ಮದ್ದು ಏನು ; ೨೪. ಚರಿಗೆವೋದರ್—ಭಿಕ್ಷಕ್ಕೆ ಹೋದವರು ; ೨೭. ಮಗುಟ್ದು ಬರ್ಪೋರ್—ಹಿಂದಿರುಗಿ ಬರುವರು.

**೨೦೫.** ೧. ಪರಿಚ್ಛೇದಿಸಿ—ನಿಶ್ಚಯಿಸಿ ; ೫. ಕಿಚ್ಚಿನುಪಸರ್ಗಮಂ—ಉರಿಯ ಉಪದ್ರವವನ್ನು ; ೯. ಚತುರ್ವಿಧದೇವನಿಕಾಯಂ—ನಾಲ್ಕು ಬಗೆಯಾದ ದೇವತೆಗಳ ಸಮೂಹ ; ಭವನವಾಸಿ, ವ್ಯಂತರ, ಜ್ಯೋತಿಷ್ಯ, ವೈಮಾನಿಕ ಎಂಬವರು ; ೧೦. ಜಱಿದು ನುಡಿದೊಡೆ—ಗದರಿಸಿ, ಬಯ್ದು ಹೇಳಿದರೆ ; ೧೧. ಒರ್ಮೆಗೆ—ಒಂದು ಸಲಕ್ಕೆ ; ೧೫. ನೆಗೞ್ದಂ—ಮಾಡಿದನು. ಆಚರಿಸಿದನು. ೨೧. ಪ್ರತಿಬದ್ಧಂಗಳ್—ಅನುಬಂಧಗಳು.

## ೧೫. ಚಿಲಾತಪುತ್ರನ ಕಥೆ

**೨೦೬.** ೨. ಚಿಲಾತ<(ಸಂ) ಕಿರಾತ ; ಚಿಲಾತಮಿತ್ರ ಎಂದು ಕಥಾಕೋಶದಲ್ಲಿದೆ ; ೫. ಅರಿಯುವಪ್ಪ ಪುಣ್ಗಳಿಂದಂ—ಅಸಾಧ್ಯವಾದ ಗಾಯಗಳಿಂದ ; ೬. ಉರ್ಚಿಪಟ್ಟೊನಾಗಿ—ಭೇದಿಸಲ್ಪಟ್ಟವನಾಗಿ ; ಕಟ್ಟಿಱುಂಪೆಗಳಿಂದಂ—ಕಟ್ಟಿರುವೆಗಳಿಂದ ; ೭. ಒನಲಿಯಪ್ರೊಲ್—ಜರಡಿಯಂತೆ ; ೯. ಪೊರ್ದಿದೋಂ—ಹೊಂದಿದನು ; ೧೬. ದುಷ್ಟಾರ್ತ್ವಮಂ—ತುಂಟಕುಮಾರಿಯನ್ನು ; ೧೭. ಪಂದಿಯ ಬಟ್ಟೆಯಂ—ಹಂದಿಯ ದಾರಿಯನ್ನು ; ತಗುಳ್ದೊಡೆ—ಬೆನ್ನಟ್ಟಿಹೋದರೆ ; ಗಾಳಿಗೊಂಡು—ಗಾಳಿಯ ಮೂಲಕ ವಾಸನೆಯನ್ನು ತಿಳಿದು ; ೧೮. ಸಾರೆ—ಹತ್ತಿರ ; ೧೯. ಪಲ್ಲಣಮಂ—ಜೀನನ್ನೂ (ಸ) ಪರ್ಯಾಣ ; ಪಲ್ಯಾಣ. ಪಲ್ಯಯನ ; ೨೧. ಚದುರಸಿಗೆಯುಮಂ—ನಾಲ್ಕು ಮೂಲೆಗಳುಳ್ಳ ವಸ್ತ್ರವನ್ನು, ಜೀನಿನ ಮೇಲೆ ಹಾಕುವ ಚತುಷ್ಕೋಣಗಳ ತಿವಾಸಿಯನ್ನು, (ಸಂ) ಚತುರಸ್ರಕ "ಮುದದಿ ತಿಲಕದ ಪಕ್ಕೆಯೊಳಿಟ್ಟು ಚದುರಸಿಗೆಯನು ಹಾಕಿ(ಸಿ)ದ" ಎಂದು ಪ್ರಯೋಗ ;

**೨೨೨.** ೨: ಗೊಡ್ಡಮಾಡುವುದಂ—ಚೇಷ್ಟೆಮಾಡುವುದನ್ನು : ಬರ್ದುಕಲತ್ತಪ್ಪೊರಿಲ್ಲ—ಬದುಕಲು ಅವಕಾಶವನ್ನು ಕೊಡುವವರಲ್ಲ ; ೩. ಮುನ್ನ ಕಟಿದ—ಮುಂಚೆ ಆಗಿಹೋದ : ೭. ಬಟ್ಟದು—ಹಿಂದೆ : ೧೧. ಕಿಮ್ಮುಗೆ—ಮಿತಿಮೀರಲು, ಕ್ರಮಿಸಲು : ತೇಜೋವೃದ್ಧಿ—ತೇಜಸ್ಸಿನ ವೃದ್ಧಿ. ಏಳಿಗೆ ; ಘನರವದಿಂ—ಗುಡುಗಿನ ಶಬ್ದದಿಂದ ; ೨೬. ಕೊಂಕನಾಗಿ—ವಕ್ರನಾಗಿ.

**೨೨೩.** ೨: ತ್ರಸಸ್ಥಾವರಂಗಳೊಳ್—ಚಲನ ಮತ್ತು ಚಲನವಿಲ್ಲದ ಜೀವಿಗಳಲ್ಲಿ ; ೩. ನೀಡಱಿಂದೆ—ದೀರ್ಘಕಾಲದಿಂದ ; ಎತ್ತಾನುಂ—ಎಲ್ಲಿಯಾದರೂ ; ೫. ಪೆತ್ತು—ಪಡೆದು ; ಪಂಚನಮಸ್ಕಾರದೊಳ್—ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು—ಇವರಿಗೆ ಮಾಡುವ ಅಯ್ದು ನಮಸ್ಕಾರಗಳು . ೭. ಭವ್ಯರ್ಕಳ್—ಭವ್ಯಜನರು : ೭. ಮೊದಲಾಗೊಡೆಯ—ಮೊದಲಾಗುಳ್ಳ ; ಪಿಟಿಸಿ—ಹಿಂಡಿಸಿ ; ಅಪವರ್ಗ—ಮೋಕ್ಷ.

## ೧೭. ಚಾಣಾಕ್ಯರಿಸಿಯ ಕಥೆ

**೨೨೪.** ೫: ತುಱುಪಟ್ಟಿಯೊಳ್—ಆಕಳ ಹಟ್ಟಿಯಲ್ಲಿ ; ೬. ಗೊಬ್ಬರದೊಳ್—ಆಕಳ ಸೆಗಣಿಯಲ್ಲಿ. ಪ್ರಾ. ಗೊಬ್ಬರ—ಗೋಮಯಂ—ಕರೀಸಮ್ಮಿ ಎಂದು ಹೇಮಚಂದ್ರ, ಬಾಸೆಗಣಿ, ಬೆರಣಿ ಎಂಬರ್ಥ ; ಉರಿಪೆಪಟ್ಟುದಾದೊಡೆ—ಉರಿಸಲ್ಪಟ್ಟದ್ದಾದರೆ, ಪೊರ್ದಿದೊಂ—ಪಡೆದನು : ಉತ್ತಮಂ ಅರ್ಥಂ—ಪರಮಪುರುಷಾರ್ಥವನ್ನು ಎಂದರೆ ಉತ್ತಮಗತಿಯನ್ನು ; ೧೩. ನಂದವಂಶದೊಂ—ನಂದವಂಶದವನು ; ೧೮. ಕಣ್ಬೇಟಂಗೊಂಡು—ಚಕ್ಷುಪ್ರೀತಿಯನ್ನು ಹೊಂದಿ, ನೋಡಿದ ಕೂಡಲೇ ಪ್ರೇಮಿಸಿ : ಬಾೞ್ವೆಂ—ಸುಖವಾಗಿ ಬದುಕುತ್ತೇನೆ : ಎಂಬ ಬಗೆಯಿಂದಂ—ಎನ್ನುವ ಎಣಿಕೆಯಿಂದ : ೧೯. ಮೇಗೆೞ್ವಂತಿರೆ—ಮೇಲೆ ದಂಡೆತ್ತಿಬರುವಹಾಗೆ ; ೨೦. ಸಾರವಪ್ಪ—ಬೆಲೆಬಾಳುವ : ದ್ರವ್ಯಮಂ—ವಸ್ತುಗಳನ್ನು ; ಮಡಗಿ—ಬಚ್ಚಿಟ್ಟು : ೨೧. ಉಚ್ಚವಿಗ್ರಹದೊಳ್—ದೊಡ್ಡ ಯುದ್ಧದಲ್ಲಿ. ಭಾರಿ ಹೋರಾಟದಲ್ಲಿ : ೨೨. ಬಯ್ಗುರುಳಿನ ಜಾವದಾಗಳ್—ಮುಂಜಾನೆಯ ಹೊತ್ತಿನಲ್ಲಿ ; ೧೩. ಗುಂಡಿತಪ್ಪುದು—ಆಳವಾಗಿರುವುದು, "ಅದಱ ನೀರ್ ಗುಂಡಿತ್ತೆಂದೀ ದರಿಯೊಳ್" ಎಂದು ಪಂಪನ ಪ್ರಯೋಗ (ಪಂಪಭಾ. ೫–೬೧) : ನಾಡೆ ಕಸಱಿನೊಡೆಯ—ಅಧಿಕವಾಗಿ ಕೆಸರನ್ನುಳ್ಳ : ಪೞಪಾವಿಯ ತಡಿಯೊಳ್—ಹಳೆಬಾವಿಯ ದಡದಲ್ಲಿ ; ೨೫. ಪೂಗೊಯ್ವ—ಹೂವನ್ನು ಬಿಡಿಸುತ್ತಿದ್ದ, ಕೊಯ್ಯುತ್ತಿದ್ದ.

**೨೨೫.** ೧. ಪಾಯ್ದೋಡುವ—ಮುಂದಕ್ಕೆ ನುಗ್ಗಿ ಓಡುವ : ಭರದಿಂ—ವೇಗದಿಂದ : ೨. ಅದಮಾನುಂ—ವಿಶೇಷವಾಗಿ ;

**ಶ್ಲೋಕ** ॥ ಇಯಂ—ಈ ಶಾಖಾ—ಮರದ ಕೊಂಬೆ. ಯೇನ—ಯಾವ, ವಾನರೇಣ—ಕಪಿಯಿಂದ. ವಾ—ಅಥವಾ, ನರೇಣ—ಮನುಷ್ಯನಿಂದ, ಕಂಪಿತಾ—ಅಲುಗಿಸಲ್ಪಟ್ಟಿತೋ, ವರ್ಷಸಹಸ್ರಾಂತಾತ್ ಅಪಿ—ಸಾವಿರ ವರ್ಷಗಳ ಅಂತ್ಯದವರೆಗಾದರೂ, ಮದ್ದೋಷಂ—ನನ್ನ ತಪ್ಪನ್ನು, ಕಥಯಿಷ್ಯತಿ—ಹೇಳುತ್ತದೆ.

೫. ನೇಸಮ್ಮೂಡಿದೊಡೆ—ಸೂರ್ಯೋದಯವಾದರೆ. "ಣೇಸರೋ ರವಿ" ಎಂದು ಹೇಮಚಂದ್ರ. ಈ ಶಬ್ದ ದ್ರಾವಿಡದಿಂದ ಪ್ರಾಕೃತಕ್ಕೆ ಎರವಲು ; ೬. ಓಲಗಕ್ಕೆ—ಆಸ್ಥಾನಕ್ಕೆ : ೭. ಎಲ್ಲಾ ಪೊಳಿಯುಮಂ—ಎಲ್ಲಾ ಸಾಲುಗಳನ್ನೂ ; ಅಱಸಿಯಱಸಿ—ಹುಡುಕಿ ಹುಡುಕಿ ; ಕೃತಕ ದುಃಖಮಂ—ಸುಳ್ಳು ದುಃಖವನ್ನು : ೧೧. ಮಱೆವಾೞುತ್ತಿರ್ಕುಂ—ರಹಸ್ಯವಾಗಿ ಸುಖವಾಗಿರುತ್ತಿದ್ದನು ; ೧೩. ಅಱಿಯದಿರ್ಕುಮೆ—ತಿಳಿಯದಿರುವನೆ ; ೧೪. ಅರಯ್ವೆಂ—ಹುಡುಕುತ್ತೇನೆ : ಮಣಿಪೀಟ ಮಕುರದೊಳಮರ್ಚಿ—ರತ್ನಖಚಿತವಾದ ಗುರಾಣಿಯನ್ನು ಎದೆಯಲ್ಲಿ ಸೇರಿಟ್ಟುಕೊಂಡು ; ೧೮. ವಿಯೋಗದಿಂ—ಸಾವಿನಿಂದಾದ ಅಗಲಿಕೆಯಿಂದ : ಸಾಭಿಪ್ರಾಯ ಸಂಬಂಧಮಪ್ಪ—ವಿಶೇಷಾರ್ಥದ ಸಂಬಂಧವುಳ್ಳ,

**೨೩೦.** ೨: ಪಡಿಯಱಿಸುವಮೆ—ಬಾಗಿಲು ಕಾಯುವವನಿಂದಲೇ : ಪೆಡತಲೆಯುಂ—ತಲೆಯ ಹಿಂಭಾಗವನ್ನು ; ೪ ಅನಂದನಾಗೆ—ಆನಂದವಿಲ್ಲದವನಾಗಲು (?) ; ಅಬಂಧು—ಬಂಧುವಿಲ್ಲದವನು ; ೬. ಕಾಸೆಗಳಂ—ಚಡ್ಡಿಗಳನ್ನು ; ಕಳೆಯೆನೆಂದು—ತೆಗೆಯುವುದಿಲ್ಲವೆಂದು ; ಕಾವಿಯ ಸೀರೆಗಳನುಟ್ಟು—ಕಾವಿಯ ಬಣ್ಣದ ವಸ್ತ್ರಗಳನ್ನು ಧರಿಸಿ ; ಭಗವಂತ ವೇಷಮಂ—ಸನ್ಯಾಸಿಯ ವೇಷವನ್ನು ; ೧೨. ನೆಱಪುವೆಂ—ಪೂರ್ಣಗೊಳಿಸುತ್ತೇನೆ; ಪುಟ್ಟಿದ ಕೂಸಂ—ಹುಟ್ಟಿದ ಮಗುವನ್ನು. ಈಯಲಾರ್ಪೊಡೆ—ಕೊಡಲು ಸಮರ್ಥರಾದ ಪಕ್ಷಕ್ಕೆ: ೧೩. ಸನ್ನಿಗೊಂಡು—ಭಾಷೆ ತೆಗೆದುಕೊಂಡು : ೧೪. ಜಾಲದ ಗಂತಿರೆ—ಗವಾಕ್ಷಿಯಂತೆ. (ಸಂ) ವಾತಾಯನ > ಜಾಲ ; ಛಿದ್ರಂ ಮಾಡಿ—ರಂಧ್ರ ಮಾಡಿ ; ೧೫. ಇರುಳ್ ಮಧ್ಯಾಹ್ನಮಪ್ಪ ಪೊೞ್ತಱೊಳ್—ರಾತ್ರಿ ಚಂದ್ರ ನಡುನೆತ್ತಿಗೆ ಬರುವ ಹೊತ್ತಿನಲ್ಲಿ. ಚಂದ್ರನು ಆಕಾಶದ ಮಧ್ಯಕ್ಕೆ ಬರುವ ವೇಳೆಯಲ್ಲಿ ; ಒಂದೊಂದು ಕಾಜಿನ ಬಟ್ಟಲೊಳ್—ದೊಡ್ಡದಾದ ಒಂದು ಗಾಜಿನ ಬಟ್ಟಲಲ್ಲಿ ; ೧೬. ಕಮ್ಮಿತಪ್ಪ—ಗಮಗಮಿಸುತ್ತಿರುವ : ೧೭. ತೃಷ್ಣಾಭಿವೃದ್ಧಿಯಪ್ಪ—ಬಾಯಾರಿಕೆಯನ್ನು ಹೆಚ್ಚಿಸುವ ; ಊಡಿ—ತಿನ್ನಿಸಿ ; ೨೧. ನೆಱೆದತ್ತು—ಪೂರ್ಣವಾಯಿತು. ೨೨. ಪೆಸಲೆಯಾದ—ಹೆತ್ತ ; ಕೂಸಂ—ಮಗುವನ್ನು : ೨೩. ದಾದಿಯನಿಟ್ಟು—ದಾದಿಯರನ್ನು ನೇಮಿಸಿ ; ೨೪. ಬಾಯ್ವೆಣ್ಣೆಯೊಡನೆ—ತಿನ್ನಿಸುವ ಬೆಣ್ಣೆಯೊಡನೆ : ಕಿಱಿಕಿಱಿದೆ—ಕೊಂಚಕೊಂಚವಾಗಿಯೇ ; ನಂಜನೂಡಿ—ವಿಷವನ್ನು ತಿನ್ನಿಸಿ : ೨೫. ತಗುಳ್ದೊನ್—ತೊಡಗಿದನು.

**೨೩೧.** ೧ : ತಳವಱರ್ಗಳ್ಗೆ—ನಗರರಕ್ಷಕರಿಗೂ ಕೊತ್ವಾಲರಿಗೂ ; ೩ ಈತಂಗಱಸುವುದಾಱಿದಪ್ಪೆಂ—ಇವನಿಗೆ ದೊರೆತನವನ್ನು ಕೊಡುತ್ತೇನೆ : ಇಲ್ಲಿಯ ಬಾೞ್ಕೆಂ ಪದಿಪ್ಪಡಿ ಬಾೞಂ—ಇಲ್ಲಿನ ಜೀವಿತಕ್ಕಿಂತ ಹತ್ತರಷ್ಟು ಮಿಗಿಲಾದ ಜೀವಿಕೆಯನ್ನು ; ೫. ತಂತ್ರಮಂ—ಸೈನ್ಯವನ್ನು : ೬. ಪೊನ್ನಂ ಮಾಳ್ಪ—ಚಿನ್ನವನ್ನು ಮಾಡುವ ; ಬಗೆಯಿಂದಂ—ಮನಸ್ಸಿನಿಂದ ; ಮರ್ದುಗಳನಱಸಿ—ಮೂಲಿಕೆಗಳನ್ನು ಹುಡುಕುತ್ತ : ೭. ತೊೞಲ್ವನ್—ಅಲೆದಾಡುವನು ; ತಪ್ಪಲೊಳ್—ತಪ್ಪಲಿನಲ್ಲಿ : ಅದಮಾನಂ ಗುಂಡಿತಪ್ಪ—ತುಂಬ ಆಳವಾದ: ರಸದ ಬಾವಿಯಂ—ಸಿದ್ಧರಸದ ಎಂದರೆ ಮುಟ್ಟಿದ್ದನ್ನೆಲ್ಲ ಚಿನ್ನವಾಗಿಸುವ ರಸವುಳ್ಳ ಬಾವಿಯನ್ನು ; ೮. ಮೊಡೆನಾರ್ಪುದು—ಮಳೆ ಮಜ್ಜಿಗೆಯಂತೆ ನಾತುಬಡಿಯುತ್ತಿರುವುದನ್ನು, ಹಳಸಿದ ಮಾಂಸದ ನಾತವುಳ್ಳುದನ್ನು, (ತಮಿಳು) ಮುಡೈನಾಱ್ಱಮ್ ; "ಪೆಣಮೆಂಬ ಪೆಸರಾಗಿ, ಅಣಿಮಿರಿಸದಂತಾಗಿ, ಮೊಡೆನಾತಕಿಡೆಯಾಗಿ, ಪಡುಕೆಯುಂಬುದುಮಾಗಿ" ಎಂದು ಬಂಧುವರ್ಮನ ಪ್ರಯೋಗವುಂಟು (ಜೀವಸಂ. ೭–೩೨) ; ಕಳೆದು—ತೆಗೆದುಹಾಕಿ ; ೯. ಬಾೞುತಿರ್ದ—ಬದುಕಿರುವ ; ೧೧. ಜಿಚ್ಚವಂ—ಸನ್ಯಾಸಿ ; ಮೊಗೆದು—ತುಂಬಿ : ೧೨. ತೋಳಂದಂ—ಮರಾಕೆಯಿಂದ ; ೧೪. ಸೋರೆಯಂ—ಸೋರೆಯ ಬುರುಡೆಯಲ್ಲಿ ; ತೀವಿ—ತುಂಬಿ : ೧೬. ಬಾೞಿಪ್ಪೆಂ—ಬದುಕಿಸುತ್ತೇನೆ ; ೧೭. ನೀಡುನೇಣಂ—ಉದ್ದವಾದ ಹಗ್ಗವನ್ನು ; ೧೮. ರಸಂ ತಿಂದ ಮೆಯ್ಗೆ—ಸಿದ್ಧರಸವು ಕೊರೆದು ಗಾಯಗೊಳಿಸಿದ ಮೈಗೆ ; ಪ್ರತೀಕಾರದ ಮರ್ದುಗಳಂ—ಪರಿಹಾರ ಕೊಡುವ ಔಷಧಿಗಳನ್ನು : ೨೦. ಒಂದು ಪೇೞು—ಒಂದು ಹೇರು ; ಒಟ್ಟುವರ್—ರಾಶಿ ಮಾಡುವರು : ಪೇೞು—ಹೇರು, ಹೊರೆ.

**೨೩೨.** ೪ : ಬಾೞ್ತೆಯಾಗೆ—ಕೆಲಸಕ್ಕೆ ಬೇಕಾಗಲು : ಬಾೞ್ತೆಯಲ್ತು—ಉಪಯೋಗವಿಲ್ಲ ; ೧೦. ಮೋಗೆದು—ಮೇಲೆ ಧಾಳಿಯಿಟ್ಟು : ಬರ್ದುಂಕಿ—ತಪ್ಪಿಸಿಕೊಂಡು : ೧೪. ಕೊಳ್ಗುಳದೊಳಗೆ—ಯುದ್ಧಭೂಮಿಯಲ್ಲಿ : ೧೬. ಸಾಲಿಗರ ಮನೆಯಂ—ನೇಕಾರರ ಮನೆಯನ್ನು : ೧೭. ಸಾಲಿಗರ ಬಿರ್ದಿ—ನೇಕಾರರ ಮುದುಕಿ ; ಬಱಿಲಿಕ್ಕಿ—ಕುಳ್ಳಿರಲು ಮಣೆಯನ್ನು ಹಾಕಿ : ೧೮. ಕಂಚೆನಿಟ್ಟು—ತಟ್ಟೆಯನ್ನಿಟ್ಟು : ಅಲಂಪಿನಿಂ—ಸಂತೋಷದಿಂದ : ೨೦. ಅದಿರ್ದು—ಅಲುಗಾಡಿಸಿ. ಕೈಯಂ ಬಿದಿರ್ದು—ಕೈಯನ್ನು ಕೊಡವಿ ; ಬಿರ್ದಿ—ಮುದುಕಿ : "ಕೈಯಂ ಜಾಡರ್ನವಂ ಬಿರ್ದಿ ಕಂಡು ನಕ್ಕಿಂತೆಂದಳ್" ಇದು ಕಂದಪದ್ಯದ ಕೊನೆಯ ಪಾದವಂತಿದೆ. ವೃತ್ತಗಂಧಿ ; ೨೫. ಬುದ್ಧಿಯಂತೆಯುಂ—ಬುದ್ಧಿಯುಳ್ಳವನು.

**೨೩೩.** ೨; ತನ್ನ ಕೊಟ್ಟ—ತಾನು ಕೊಟ್ಟ : ಪಗೆಗೊಂಡು—ದ್ವೇಷವನ್ನು ಹೊಂದಿ ; ೩: ತನ್ನಾರ್ಪಂದೆ—ತಾನು ಸಮರ್ಥನಾಗಿರುವಾಗಲೇ ; ೭. ಪ್ರತಿಪಕ್ಷಮಂ—ಶತ್ರುಸೈನ್ಯವನ್ನು : ೧೬. ಬಿತ್ತರಮನೊಡ್ಡಿ—ಸೈನ್ಯವನ್ನು ಎದುರಿಗೆ ನಿಲ್ಲಿಸಿ, ಚಾಚಿ ; ೨೨. ಕಾಪನಿಟ್ಟು—ಕಾವಲಿರಿಸಿ.

**೨೩೪.** ೪: ಉಣಿಸಂ ಮಾಡಿ—ಔತಣಮಾಡಿ : ಸೊಕ್ಕಪ್ಪ—ಸೊಕ್ಕನ್ನುಂಟುಮಾಡುವ. ೬. ಮೆಯ್ಯರಿಯದೆ—ಮೈಮೇಲೆ ಪ್ರಜ್ಞೆಯಿಲ್ಲದೆ ; ೯. ಆಡಿದಂ—ಕುಣಿದನು ; ೧೦. ಪೊರ್ದ—ಕೈಕೊಂಡ ; ನೆಱೆದತ್ತು—ಪೂರ್ಣವಾಯಿತು ; ೧೧. ಜಾದಿನೊಳೊದಿದವು—ಕಾವಿಯನ್ನು ಬಳಿದುವು ; ಪೊನ್ನಗುಂಡಿಗೆಯುಂ—ಚಿನ್ನದ ಕಮಂಡಲವು ; ೧೨. ಮೂಱುದಂಡಮುಂ—ತ್ರಿದಂಡವು, ಸನ್ಯಾಸಿ ಹಿಡಿಯುವ, ಮೂರು ಕೋಲುಗಳನ್ನು ಕಟ್ಟಿದ ದಂಡ ; ೧೩. ಎನಗೆ ಬಸಮಾದಂ—ನನಗೆ ವಶವಾದನು : ಪೊದೆ ಪಱಿಯಂ—ಹೊದೆ, ಹಳೆಯನ್ನು : ೧೫. ಲಟಹದಿಂದ—ರಮ್ಯವಾಗಿ, ಸುಂದರವಾಗಿ, (ಪ್ರಾ.ದೇ.) "ಲಡಹೋ ರಮ್ಯಃ, ಲಡಹೋ ವಿದಗ್ಧಮಿತ್ಯನ್ಯೇ." "ಲಟಹಮಾ ಲಾವಣ್ಯಮಾ ಬಿಂಕಮಾ" ಎಂದು ರನ್ನನ ಪ್ರಯೋಗ (ಗದಾ. ೧೦) : ಆಡಿದೊಂ—ನರ್ತಿಸಿದನು ; ೨೬. ಪಾರ್ವಂತಿ—ಪಾರ್ವಸ್ತ್ರೀ, ಬ್ರಾಹ್ಮಣಿತಿ ; ೧೮. ಜೀವಿತಂ ಗೆಯ್ದು—ಬಾಳನ್ನು ಕೊಟ್ಟು ; ೧೯. ತಳವರ್ಗಮುಮಂ—ತಳವಾರರನ್ನೂ ;. ಸಂತವಿಸಿ—ಸಮಾಧಾನಪಡಿಸಿ : ೨೧. ಪತ್ತುಂ ಕದಿರ್ಗಳ್—ಪತ್ತೂ ಅರಕಾಲ್ಗಳು : ಅರ್ದಂ—ಮುಳುಗಿದ್ದನ್ನು : ೨೫. ದಶಮೌರ್ಯರ್ಕಳ್—ಹತ್ತು ಜನ ಮೌರ್ಯರು.

**೨೩೫.** ೧: ಬಾಳಂಕಿಟ್ಟು—ಬರೆಯಿಂದ ಕತ್ತಿಯನ್ನು ಸೆಳೆದು : ನಿಮಿರ್ದ—ನೆಟ್ಟಗಾಗಿ : ೨. ಬಂಚಿಸಿ—ವಂಚಿಸಿ ; ಪ್ರಚ್ಛನ್ನರೂಪಂ—ಮರೆಯಿಂದ : ೩. ತಲೆಯಂ ಪೋಗಿಱಿದು—ತಲೆ ಕತ್ತರಿಸಿ ಹೋಗುವಂತೆ ಹೊಡೆದು : ೪. ಪೋಯ್ದು—ಹೋಳುಮಾಡಿ : ೮. ಪನಿತುಪರಿಂದೆ—ಪಸಿಯಾಗಿ ಬಿದ್ದದ್ದರಿಂದ ; ೧೨. ಪರಿಸಿ—ಬರಮಾಡಿಕೊಂಡು ; ೧೯. ತುಱುಪಟ್ಟಿಯೊಳ್—ಆಕಳ ಹಟ್ಟಿಯಲ್ಲಿ. ೨೧. ಪಗೆಯುಮಂ—ದ್ವೇಷವನ್ನೂ : ೨೪. ಗೋಷ್ಠಿಯಿರ್ದ—ಕೂಡಿದ್ದು, ಒಂದಾಗಿದ್ದು ; ೨೬. ಸೆಡೆಗುಂ—ಮುರುಟಿಕೊಳ್ಳುತ್ತಾರೆ, ಸೇದೆಗೆಡು = ಸೇದೆಯಿಂ + ಕೆಡು : ಬಳಸಿಯುಂ—ಸುತ್ತಲೂ. ಗೊಬ್ಬರಮಂ—ಒಣಗಿಸಿದ ಸೆಗಣಿ, ಕಾಡು ಬೆರಣಿ.

**೨೩೬.** ೧ : ಬಟ್ಟಂ—ರಾಶಿಮಾಡಿ : ಕಿಚ್ಚಂ ತಗುಳ್ಚಲ್ ಪೇೞ್ದು—ಉರಿಯನ್ನು ಹೊತ್ತಿಸುವಂತೆ ನೇಮಿಸಿ.

**ಗಾಹೆ ॥** ಪುಟ ೯೨ ನೋಡಿ.

೧೪. ಕ್ಷಪಕನಂ—ಜೈನಮುನಿಗಳೂ ; ೧೮. ಆರಾಧಿಸಿ—ಉಪಾಸನೆ ಮಾಡಿ ; ಅಪವರ್ಗ—ಮೋಕ್ಷ.

## ೧೯. ವೃಷಭಸೇನರೆಂಬ ರಿಸಿಯ ಕಥೆ

**೨೩೭.** ೧೩ : ಬಿರಿದ ಪಂಡಿತಂ—ದೊಡ್ಡ ವಿದ್ವಾಂಸ ; ೧೮. ಬರವಂ—ಆಗಮನವನ್ನು : ೧೯. ಪೊಡೆವಡುವುದಂ—ನಮಸ್ಕಾರ ಮಾಡುವುದನ್ನು ; ೨೧. ನೆರವಿಯೊಳ್—ಸಭೆಯಲ್ಲಿ ; ಸಿಗ್ಗಾಗಿ—ಲಜ್ಜಿತನಾಗಿ ; ೧೫. ಮುಡಿಪಿ—ಸತ್ತು.

**೨೩೮.** ೧೧ : ಈ ಪೇೞ್ದ—ಇಗೋ ಹೇಳಿದ ಎಂದರೆ ನಿರೂಪಿತವಾದ : ಕಥೆಗಳಂ, ಎಂಬುದು ಕಥೆಗಳಾನ್ ಎಂದಿರಬಹುದು—ಕಥೆಗಳನ್ನು ; ೧೨. ಪೇೞ್ದಾರ್—ಹೇಳಿದರು, ರಚಿಸಿದರು. ಪೇೞ್ ಧಾತುವನ್ನು ಕಾವ್ಯರಚನೆಮಾಡು ಎಂಬರ್ಥದಲ್ಲಿ ಪ್ರಯೋಗಿಸಿರುವುದು ಕಾಣುತ್ತದೆ. "ಕಥಾಭಿತ್ತಿಯು ನಮನಯದಿಂ ಪೊಗೞಲೆತ್ತಿಕೊಂಡೆಂ" (ಪಂಪಭಾ. ೧-೫೧). "ಇಂತು ಪೇೞಿಸಿದ ನರೇಂದ್ರರಂ ನೆಱೆಯೇ ಪೇೞ್ದ ಕವೀಂದ್ರರುಮಾರ್ ಧರಿತ್ರಿಯೊಳ್" (ಅದೇ. ೧೪-೫೩), "ನೆರೆದಿನ್ನೂಱಿರ್ಪ ಬಿಂಬರುಂ ಪೇೞನೆ ನಾಂ ಪರಿಣತನೇ ಕಬ್ಬಂಗಳನೊರೆದಂ ರವಿ ನಾಗಭಟ್ಟನನ್ತ್ಯಾದರದಿಂ" (ಕವಿಜ. ೧-೨೮) ಇತ್ಯಾದಿ.

ಬಿಟ್ಟವಳು. ಗರ್ಭಸ್ರಾವವಾಯಿತು. ಇದನ್ನು ನೋಡಿದ ಶ್ರಾವಕರೆಲ್ಲ ಯತೀಶನನ್ನು ಕುರಿತು ಹೀಗೆಂದರು: ಈ ಕೆಟ್ಟ ಕಾಲ ಕಳೆದಮೇಲೆ ಪ್ರಾಯಶ್ಚಿತ್ತ ಮಾಡಿಕೊಳ್ಳಬಹುದು. ಒಳ್ಳೆ ಕಾಲ ಬಂದಾಗ ಮರಳಿ ತಪಸ್ಸಿಗೆ ಹೋಗಬಹುದು ; ಅಲ್ಲಿಯವರೆಗೆ ಎಡಗೈಯಿಂದ ಅರ್ಧವಸ್ತ್ರ ಹಿಡಿದುಕೊಂಡು ಭಿಕ್ಷೆಗೆ ಬನ್ನಿರಿ. ರಾತ್ರಿ ಬೇಡಿ ಹಗಲು ಊಟ ಮಾಡಿರಿ ಎಂದು. ಸಾಧುಗಳು ಇದಕ್ಕೆ ಒಪ್ಪಿಕೊಂಡರು. ಒಳ್ಳೆ ಕಾಲ ಬಂತು. ಆಗ ಆ ಮೂವರು ಮುನಿಗಳು ಸರ್ವ ಸಾಧುಗಳನ್ನು ಕೂಗಿ ಕರೆದು 'ಅರ್ಧಫಾಲಕವನ್ನು ಬಿಟ್ಟು ನಿರ್ಗ್ರಂಥರೂಪವನ್ನು ಧಾರಣೆ ಮಾಡಿರಿ' ಎಂದು ಹೇಳಿದರು. ಮುಕ್ತಿಲಾಲಸಚೇತನರು ಕೆಲವರು ನಿರ್ಗ್ರಂಥರೂಪಧಾರಣೆ ಮಾಡಿದರು. ಆ ಬಳಿಕ ಆ ಮೂವರು ಆಚಾರ್ಯರು ವಿಶಾಖಾಚಾರ್ಯನ (ಚಂದ್ರಗುಪ್ತನ) ಬಳಿಗೆ ಬಂದರು. ಅವರು ಅರ್ಧಕರ್ಪಟವನ್ನು ಬಿಟ್ಟು ಮೂವರೂ ದಿಗಂಬರರಾದರು. ಜಿನಕಲ್ಪ, ಸ್ಥವಿರಕಲ್ಪ—ಎಂಬೆರಡು ವಿಧಾನಗಳಾದುವು, ಅರ್ಧಫಾಲಕ ಸಂಯುಕ್ತರಿಂದ. ಸೌರಾಷ್ಟ್ರ ದೇಶದ ವಲಭಿಪುರ. ರಾಜ ವಪ್ರಪಾದ. ಮಿಥ್ಯಾದರ್ಶನ ದೂಷಿತನು. ಅವನ ದೇವಿ ಸ್ವಾಮಿನಿ. ಇವಳಿಗೆ ಅರ್ಧಫಾಲಕರಲ್ಲಿ ತುಂಬ ಭಕ್ತಿ. ಒಂದು ದಿವಸ ರಾಜನೂ ದೇವಿಯೂ ದಿಗವಲೋಕನವನ್ನು ಮಾಡುತ್ತಿರುವಾಗ ಒಬ್ಬ ಅರ್ಧಫಾಲಕನು ಮಧ್ಯಾಹ್ನ ವೇಳೆಯಲ್ಲಿ ರಾಜಮಂದಿರಕ್ಕೆ ಬಂದನು. ಇದನ್ನು ನೋಡಿ ರಾಜ ತನ್ನ ದೇವಿಗೆ ಹೇಳಿದನು—ಅರ್ಧಫಾಲಕ ಸಂಘ ನಿನಗೆ ಶೋಭನವಾದುದಲ್ಲ. ಇವರು ನಗ್ನರೂ ಅಲ್ಲ. ವಸ್ತ್ರವೀತರೂ ಅಲ್ಲ ಎಂದು, ವಿಡಂಬನಪೂರ್ವಕವಾಗಿ. ಒಂದು ದಿನ ಅರ್ಧಫಾಲಕ ಸಂಘವೊಂದು ನಗರಕ್ಕೆ ಬಂತು. ಅದನ್ನು ನೋಡಿ ರಾಜನು ಅರ್ಧಫಾಲವನ್ನು ಬಿಟ್ಟು ನಿರ್ಗ್ರಂಥರಾಗಿರಿ ಎಂದು ಅಪ್ಪಣೆ ಮಾಡಿದನು ನಿರ್ಗ್ರಂಥರಾಗಲು ಇಷ್ಟವಿಲ್ಲದಿದ್ದರೆ ಅರ್ಧಕರ್ಪಟವನ್ನು ಬಿಟ್ಟು ಋಜುವಸ್ತ್ರವನ್ನು ಧರಿಸಿಕೊಳ್ಳಿರಿ. ಸುಖವಾಗಿರಿ ನನ್ನ ರಾಜ್ಯದಲ್ಲಿ ಎಂದ. ಹೀಗೆ ವಪ್ರಪಾದ ನೃಪಾಜ್ಞೆಯಿಂದ ಲಾಟದೇಶದಲ್ಲಿ ಕಾಂಬಲ ತೀರ್ಥವು ಅಂದಿನಿಂದ ಆರಂಭವಾಯಿತು. ಈ ಕಂಬಲಿಕಾ ತೀರ್ಥದಿಂದ ಸಾವಲಿಪತ್ತನದಲ್ಲಿ (ದಕ್ಷಿಣಾಪಥದ) ಯಾಪನ ಸಂಘವು ಹುಟ್ಟಿತು. (ಇದೇ ಯಾಪನೀಯ ಸಂಘವಿರಬಹುದು. ಶ್ವೇತಭಿಕ್ಷು ಜಾಪುಲಿ ಸಂಘ ಎಂಬುದೆ ವಡ್ಡಾರಾಧನೆಯಲ್ಲಿ.) (೮೧ ಶ್ಲೋಕಗಳು)

## ೧೩೨. ಸಮುದ್ರದತ್ತಾದಿ ಕಥಾನಕ (=ಲಲಿತಘಟೆ)

ಕೌಶಂಬೀ ನಗರದಲ್ಲಿ ಹುಟ್ಟಿದ ಇಭ್ಯಕುಲೋತ್ಪನ್ನರಾದ ೩೨ ಶ್ರಾವಕರು. ಇಂದ್ರದತ್ತಾದಿಗಳು ಇದ್ದರು. ಅವರಿಗೆಲ್ಲ ಮಕ್ಕಳಿದ್ದರು. ಸಮುದ್ರದತ್ತಾದಿ ಶ್ರಾವಕರು ಕೇವಲಿಯ ವಂದನೆಗಾಗಿ ಹೋಗಿ ಭಕ್ತಿಯಿಂದ ಮುನಿಯನ್ನು ಕೇಳಿದರು—ನಮಗೆ ಆಯುಷ್ಯ ಪ್ರಮಾಣವೆಷ್ಟು ಎಂದು. ನೀವೆಲ್ಲ ಅಲ್ಪಾಯುಷ್ಯರು ಎಂದರವರು. ಇದನ್ನು ಕೇಳಿ ಆ ಮೂವತ್ತೆರಡು ಕುಮಾರರರು ಮಹಾ ವೈರಾಗ್ಯಸಹಿತರಾಗಿ ಪ್ರವ್ರಜಿಸಿದರು. ಯಮುನಾನದೀತೀರದಲ್ಲಿ ಪಾದೋಪಗಮನದಿಂದ ನಿಂದರು. ನದೀಪ್ರವಾಹದಿಂದ ಅವರು ಸೆಳೆಯಲ್ಪಟ್ಟವರಾಗಿ ಮಡುವಿನಲ್ಲಿ ಮುಳುಗಿ ಸತ್ತರು. ಸುರಲೋಕಕ್ಕೆ ಹೋದರು. (೮ ಶ್ಲೋಕಗಳು)

## ೧೩೩. ಧರ್ಮಘೋಷ ಮುನಿ ಕಥಾನಕಂ

ಧರ್ಮಘೋಷಮುನಿ. ಚಂಪಾನಗರ ವಾಸ್ತವ್ಯ. ಮಾಸೋಪವಾಸಾಂತ್ಯದಲ್ಲಿ ಪಾರಣೆಗಾಗಿ ತುರುಪಟ್ಟಿಗೆ (ವ್ರಜಂ) ಹೋದನು. ದಾರಿತಪ್ಪಿ ನಡೆಯಲು ಇಷ್ಟವಿಲ್ಲದೆ ಬಾಯಾರಿಕೆಯಿಂದ ಪೀಡಿತನಾಗಿ ಗಂಗಾನದೀತೀರದ ಹಸುರು ಹಸಲೆಯ ಮೇಲೆ ನಿಂತನು. ಇದನ್ನು ಗಂಗಾದೇವಿ ನೋಡಿ ಜಲಪೂರ್ಣಕಲಶಗಳನ್ನು ತಂದು ಅವನ ಮರದ ಕೆಳಗಿದ್ದ ಮುನಿಯನ್ನು ಕುರಿತು ಈ ನೀರನ್ನು ಕುಡಿದು ಸೇದೆಯನ್ನಾರಿಸಿ ಎಂದಳು. ನಿನ್ನ ಕೈಯಿಂದ ಈ ನೀರನ್ನು ಕುಡಿಯಲಾರೆ ಎಂದನು ಅವನು. ಗಂಗಾದೇವಿ ಬೇಗನೆ ಪೂರ್ವ ವಿದೇಹದಲ್ಲಿದ್ದ ಜಿನನಲ್ಲಿಗೆ ಹೋಗಿ ಮುನಿಯ ವಿಷಯವನ್ನು ಅವನಿಗೆ ತಿಳಿಸಿ, ನನ್ನ ಹಸ್ತದಿಂದ ಅವನು ನೀರು ಕುಡಿಯುವುದಿಲ್ಲ, ಇದಕ್ಕೆ ಕಾರಣ

## ೩. ಕೆಲವು ಕಠಿಣ ಪದಗಳ ಕೋಶ

(ಮೊದಲನೆಯದು ಪುಟಸಂಖ್ಯೆ : ಎರಡನೆಯದು ಪಂಕ್ತಿಸಂಖ್ಯೆ )


ಅಂಗಡಿಯುಲವಡಂ ೯೦-೬
ಅಗ್ಗಯಿಲೆ ೧೬೭-೫
ಅಡ್ಡಣಿಗೆ ೧೨೨-೧೨. ೧೩
ಅಜುನೀರ್ ೧೦೧-೧೩
ಅಜೀತ ೫೦-೨೦
ಅರ್ಧಗಪ್ಪಡ ೧೩೬-೧೬. ೨೩, ೨೭ ; ೧೩೭-೧೮
ಅರ್ಧಗಪ್ಪಡದ ತೀರ್ಥ ೧೩೭-೨, ೩, ೬
ಅರ್ಧಗಪ್ಪಡದ ಯತಿ ೧೩೭-೧೧
ಅರ್ಧಗಪ್ಪಡದ ಸಂಘ ೧೩೭-೯, ೧೨
ಅಲಂಪು ೨೩೨-೧೮
ಅಳಿಪು ೬೧-೧೩
ಅಳಿ ೧೧೨-೨೬
[ಅಳಿ]ಜುವಳ್ಳ ೧೬೬-೨೮
ಅಬ್ಬ್ಯಾಡು ೬೭-೧

ಆಂದೆ ೧೩೭-೯
ಆಪಣ ೬೦-೧. ೧೩, ೧೪
ಆರವೆ ೧೭೦-೨೫
ಆಳಂಬೆ ೧೭೦-೧೮; ೧೯೫-೧

ಇಂಬುಗೆಯ್ ೮೭-೧೫
ಈಜುಂಪೆ ೨೧೨-೫
ಈಜುಪೆ ೨೨೦-೨೫

ಉಂಕೆ ೧೯೫-೩
ಉಕ್ಕಿವ ೫೦-೨೪, ೨೬
ಉಗುರಿಸು ೧೬೧-೧೧೭-೧೦
ಉಚ್ಚಳಿಸು ೧೦೩-೩೦
ಉಣ್ಣಪಡು ೨೦೧-೭ ; ೨೨೬-೧೮
ಉತ್ತವಳಿ ೭೫-೨೨
ಉರ್ಕಿವ } ೬೧-೧೯
ಉರ್ಕ್ಕಿವ } ೭೯-೪ ; ೮೪-೨೪
ಉರ್ಚು ೪೯-೪ ; ೯೬-೧
ಉಲ್ಲವ ೧೨೭-೨೭ ; ೧೫೬-೧೦
ಉಸಿರ್ಪತ್ತು ೧೭೧-೧೭
ಉಳಿ ೧೭೩-೬
ಉಳಿಸೆಂ[ದು] ೧೭೩-೫
ಉಜದ ೫೭-೧ ; ೫೦-೯೪ ; ೨೦೯-೧೨

ಊಡು ೮೯-೧೨, ೨೩ ; ೧೫೫-೯ ; ೨೦೭-೨೦ ; ೨೧೫-೨೬, ೨೭ ; ೨೨೦-೧೧ ; ೨೨೧-೨೦ ; ೨೨೮-೧೯ ; ೨೩೦-೧೭, ೨೪ ; ೨೩೦-೧೧

ಎಕ್ಕವದ್ದಳಿ ೧೨೪-೧೧
ಎಡೆ ೧೬೭-೨೨
ಎಣಿಕೊಳ್ ೬೧-೪
ಎರಳಿ ೧೦೫-೬.
ಎಟಲ್ ೧೩೫-೧೨; ೧೬ ; ೧೩೬-೧೬ ; ೧೬೪-೧೭
ಎಟ್ಟಿ ೬೧-೧೭, ೨೩ ; ೨೦೦-೧೮

ಏಕಸಜು ೧೩೨-೨೭
ಏರಣೆಗ ೯೫-೧೧
ಏಳಿದು ೫೪-೧೧
ಏಜಲಿಕ್ಕು ೨೩೮-೧೭
ಏಜಿಸು ೧೨೯-೯ ; ೧೩೫-೨೪ ; ೧೩೬-೨೪ ; ೧೨೯-೩ ; ೧೫೯-೧೯ ; ೧೭೨-೨ ; ೧೪೬-೫
ಏಜು ೧೦೩-೨೮ ; ೧೬೩-೪

ಒಂತಿ ೧೪೧-೬ ; ೧೮೪-೪
ಒಂದೆವಜಿಗುಟ್ಟು ೫೭-೨೪ ; ೫೮-೧೧
ಒಕ್ಕಲಿಗ ೨೩೧-೨೩ ; ೨೩೨-೧
ಒಟ್ಟಯಿಸು ೯೫-೭ ; ೧೯೩-೨ ; ೨೦೦-೯
ಒಟ್ಟೆ ೧೪೧-೫
ಒಡ್ಡಣ ೧೯೨-೫ ; ೨೩೩-೧೬
ಒದಜು ೧೪೪-೮

ಒಲ್ಲಣಿಗೆ ೬೨-೨೩
ಒಳಜು ೧೬೮-೨೩
ಒಳ್ಳಿದ ೬೧-೬
ಓವರಿ ೧೬೭-೧೯ ; ೨೦೩-೨೬ ; ೨೧೪-೨
ಓಸರಿಗೆ ೧೨೯-೧೨
ಓಳಿ ೧೧೭-೨೪ ; ೧೧೮-೨
ಕಂಬಳ ೬೯-೨೦, ೨೫, ೨೬ ; ೮೩-೨, ೭
ಕಂಬಳತೀರ್ಥ ೧೩೭-೧೯
ಕಚ್ಚುಟ ೧೬೨-೧೬
ಕಟ್ಟೆಜುಂಪೆ ೨೧೨-೫
ಕ[ದಿರ್] ೨೩೪-೨೧
ಕರಗ ೧೪೭-೨೮ ; ೧೪೮-೫
ಕರಗದ ದಾರೆ ೧೫೫-೩
ಕರಪಟ ೧೭೨-೨೫
ಕರ್ಖಾಂಗಳ್ ೧೩೯-೧೨
ಕಬ್ರೋನ್ ೯೫-೨೬ ; ೯೬-೧
ಕಲಿ ೪೯-೨೨, ೨೩, ೨೬ ; ೫೦-೧, ೮, ೧೦, ೧೪
ಕಲ್ನಿಲೆ } ೧೬೦-೬
ಕಲ್ನೈಲೆ } ೨೦೪-೧೪
ಕವರ್ ೫೨-೧೭
ಕಪ್ಪತಿಕೆ ೨೨೯-೧
ಕಳ್ದ ೧೬೬-೨೦ ; ೧೬೯-೨೩
ಕಳ್ದು ೧೬೭-೫
ಕಳ್ಳಿದ ೬೬-೧೭ ; ೧೯೪-೨೭
ಕಜಿಮೆ } ೫೩-೨
ಕಜುಮೆ } ೫೭-೪
ಕಟ್ಬಿಪ್ಪು ೧೩೨-೧೭, ೨೭
ಕಟ್ಬಿದ್ಂಗಳ್ ೨೦೦-೧೦ ; ೨೦೨-೧೨
ಕಾಜು ೨೩೦-೧೬
ಕಾದಲ ೮೦-೨೭
ಕಾದಲಳ್ ೮೩-೨೫
ಕಾರಂಡ ೧೪೧-೯
ಕಾಸೆ ೨೩೦-೬
ಕಾಟ್ಕಿಚ್ಚು ೨೧೮-೬
ಕಿಕ್ಕಿಜಿಗಿಜಿ ೧೭೭-೫
ಕಿಟ್ಟು ೭೩-೫
ಕಿರಿಸು ೨೨೧-೧೭
ಕಿರುಂಡೆಗ ೮೮-೧೧
ಕೀಜು ೫೨೫-; ೯೨-೭ ; ೧೨೬-೬ ; ೧೩೩-೧೪
ಕುತ್ತಿಸಿಜಿಬ್ ೧೭೧-೧೩
ಕುತ್ತು ೧೪೦-೨೮
ಕುಮ್ಮರಿ ೨೦೦-೭, ೯, ೧೪ ; ೨೦೪-೧
ಕುರ್ಕ ೧೪೧-೯
ಕುಜಿವಡ ೧೩೭-೧೮
ಕೆಂದು ೧೩೪-೨೬
ಕೆತ್ತು ೯೦-೧೪
ಕೇರ್ ೭೭-೬ ; ೭೮-೧೦
ಕೇಳ್ಪಿ ೪೯-೧೪
ಕೈಸಾಣೆ ೨೨೭-೧೩
ಕೊಂಕ ೨೨೨-೨೬
ಕೊಯ್‌ತಲೆಯಧವಾ ೭೧-೨೧
ಕೊರಸು ೧೯೫-೩
ಕೊಸೆಗೊಳ್ ೬೭-೨೨
ಕೋಡಗ ೨೧೬-೧೪
ಕೋಡು ೧೦೦-೧೪
ಕೋವಣ ೬೦-೮ ; ೨೨೧-೧೭
ಕೋಳ್ಪಡು ೬೭-೫
ಕೋಟ್ಯಳ್ ೮೨-೧೬
ಗಡಿ ೧೨೯-೨೫ ; ೧೩೦-೧೪
ಗಣೆಯಾನೆ ೧೪೫-೧೮
ಗರುಪಣ ೨೧೫-೧೧
ಗರುಹಣೆ ೨೦೦-೧೭
ಗಳಂತಿಕೆ ೭೭-೬
ಗಾಮುಂಡ ೬೪-೧೭
ಗಾಳಿಗೊಳ್ ೨೦೬-೧೭
ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಂ ೧೭೮-೩
೧೯೫-೨೪
ಗಿಣ್ಣು ೧೯೫-೧
ಗುಂಡಿಗೆ ೧೮೪-೧೧
ಗುಂಡಿತು ೨೨೪-೨೩ ; ೨೩೧-೭
ಗುಜ್ಜಿ ೧೫೦-೨೨
ಗುಡ್ಡ ೫೧-೧೧
ಗುದರ್ ೧೮೭-೧೫
ಗೊಟ್ಟಿ ೧೨೦-೨೪
ಗೊಡ್ಡ ೨೧೦-೧೧ ; ೨೨೧-೨೫ ; ೨೨೨-೨

ಗೋಸಣೆ ೯೪-೨೨ ; ೧೬೬-೧೩
ಗೋಸನೆ ೧೨೨-೪ ; ೨೦೯-೨೨
ಗೋಸನೆಗಳ ೧೯೫-೧೬

ಚದುರಸಿಗೆ ೨೦೬-೨೦, ೨೧
ಚಳಿ ೧೬೯-೨೫
ಚಿತ್ರಾರಿಗ ೭೮-೧೧
ಚೋಳಂಗಿ ೨೨೮-೧೮

ಛರ್ದಿ ೨೧೫-೯, ೧೦

ಜಾದಿನ ಸೇಲೆ ೨೩೦-೬
ಜಾದು ೨೩೪-೧೧
ಜಾನಿಸು ೧೨೭-೧೨ ; ೧೫೩-೨೪ ; ೧೮೨-೩ ; ೧೯೮-೧೫ ; ೨೧೮-೮
ಜಾವಜ್ಜೀವ ೧೩೭-೨೮ ; ೧೮೨-೨ ; ೧೮೬-೭
ಜಾವವಿರ್ ೫೮-೨೫, ೨೮
ಜಾವವಿರಿಸು ೫೮-೨೬, ೨೭
ಜೂದು ೫೮-೪
ಜೋಗಭಕ್ತಿ ೨೦೦-೮ ; ೨೦೫-೨
ಜೋಗು ೭೧-೨೪, ೨೮ ; ೭೨-೧ ; ೭೨-೮ ; ೯೨-೭, ೭ ; ೨೧೫-೨೧

ಝುಣಂಬ ೬೩-೧೨, ೧೩, ೧೭

ತಗು ೧೪೮-೯ ; ೧೬೦-೩
ತಜಿನೆವಟಿಯಿಗೆ ೧೬೭-೧೯
ತಣ್ಣತ್ತು ೧೦೮-೨೨
ತಮ್ಮನಾಟ್ಕೆ ೧೧೫-೨೫
ತರುವಲಿ ೧೨೦-೧೮
ತಳವ (ಜ) ೨೩೧-೧
ತಳಾಜಿ ೫೮-೧
ತಳಿ ೧೮೧-೩
ತಳಿಗೆ ೧೦೮-೧೭, ೨೩
ತಜಿಸಿಸಲ್ ೧೦೫-೨೬ ; ೧೬೧-೧೧
ತಟಿ ೯೯-೨೧
ತಾಂಗು ೧೨೧-೩ ; ೧೩೪-೨೯ ; ೧೬೧-೧೪ ; ೧೭೫-೯
ತಾಪು ೯೫-೨೮ ; ೯೬-೧
ತಿಂಬಡ ೧೬೦-೨೦
ತಿಣ್ಣಂ ೧೨೧-೬
ತಿಮುಟಿನಾಟಿರ್ ೧೩೪-೧೪
ತಿಸಿ ೫೨-೨೨
ತಿರುವಾಯ್ ೧೪೦-೨೨
ತುಣವ ೧೨೭-೬
ತುಯ್ಯಲ್ ೧೦೮-೧೭, ೨೨ ; ೧೨೨-೧೯

ತುರಿಪ ೪೯-೧೯ ; ೧೫೫-೨೦
ತುಳುಪಟ್ಟೆ ೧೪೭-೨೨, ೨೩, ೨೪ ; ೯೮-೧೯ ; ೨೩೫-೧೯
ತೂಂಕಡು ೨೦೦-೯
ತೆಗಲೆ ೯೨-೧೯ ; ೧೦೦-೮ ; ೧೦೩-೨೯ ; ೧೧೦-೨೯
ತೇನತೇನಂ ೨೧೭-೧೦
ತೊಗಲ್ ೨೧೬-೨
ತೊವಲ್ ೬೭-೨ ; ೧೦೮-೨೪ ; ೨೧೭-೧೫
ತೊವೆ ೧೧೯-೧೫
ತೊಟ್ಟು ೮೮-೪, ೬
ತೋರ ೯೫-೨೯

ದಂಸಮಸಕ ೧೭೮-೧೮
ದಮ್ಮ ೧೨೧-೧೧-೨೦ ; ೧೨೮-೨
ದರಿ ೧೦೦-೨
ದರ್ಶನ ೯೦-೧೩ ; ೧೬೮-೨೯
ದಸೆ ೨೨೪-೨೪
ದಾಯ ೮೧-೨೩, ೨೪
ಡಬ್ಬ ೧೮೩-೨೪ ; ೧೮೪-೨
ದೀನಾರ ೫೮-೫ ; ೬೧-೨೦, ೨೪ ; ೬೯-೨೦ ; ೬೯-೨೩ ; ೬೯-೨೬
ದೂಸಿಗ ೧೬೭-೪
ದೇಸಿಗ ೯೦-೪
ದೋಣೆಕೊಂಡ ೧೧೨-೪
ದ್ರಮ್ಮ ೫೪-೧೬, ೨೨೧-೪
ದ್ರನಿಟಿ ೮೦-೪ ; ೧೩೨-೨೨

ನಮ ೫೨-೨೫ ; ೨೩೫-೨೧
ನಾಟಕ ೧೦೯-೨೯
ನಾಡೆ ಗೆಡು ೬೭-೨೫
ನಾಡೆ ೪೮-೫
ನಂದಣ ೨೧೬-೧೧

ನಿಂದಣೆ ೨೦೦-೧೬
ನೀರಿಟಿ ೧೦೪-೧೮
ನಾಳಿಬೀಳ್ ೫೩-೧ ; ೫೭-೪
ನಾಜು ೧೪೨-೧೫
ನಾಟ್ ೧೨೦-೨೦ ; ೧೯೩-೨೩ ; ೧೯೪-೨
ನಿಶ್ರಾವ ೨೨೮-೨೦, ೨೨
ನೆಗಟಿ ೫೮-೨ ; ೫೯-೨೫ ; ೧೮೧-೭
ನೇಣ್ ೨೩೧-೧೭
ನೇತ್ರಪಟಿ ೬೩-೮

ಪಂಡಿತಿಕ್ಕೆ ೪೮-೨೫ ; ೬೮-೧೩
ಪಂದರ ೧೮೬-೯
ಪಂದೊವಲ್ ೯೫-೨೮
ಪಗರಣ ೧೬೨-೨೨
ಪಗರಣೆಗ ೧೬೨-೧೪, ೨೧
ಪಚ್ಚುಗೊಡು ೬೯-೨೮
ಫಟ್ಟಿಸಭಂಡಾರ ೧೮೪-೨೨
ಪಡಿಕಮಣ ೫೦-೩, ೨೭ ; ೬೨-೨೬ ; ೧೩೫-೮ ; ೧೩೬-೫, ೨೭
ಪಡಿಗಹ ೫೧-೮
ಪಡು ೧೨೭-೧೦ ; ೧೯೬-೧೧ ; ೨೦೬-೨
ಪಡುವೊಳ್ ೧೫೦-೩೩
ಪಣ್ ೮೪-೨೭
ಪತ್ತು ೧೪೧-೨
ಪದನ್ ೧೯೬-೭
ಪದಿರ್ ೧೬೯-೧೦
ಪದಿರ್ಮಡಿ ೨೩೧-೩
ಪಯನು ೬೬-೩
ಪರಿಯಾಣ ೧೦೮-೨೧
ಪರಿವಡಿ ೭೨-೧೦
ಪರಿವೊಟ್ಟೆ ೧೭೪-೧೮
ಪರ್ಚುಣ ೯೩-೧೧
ಪಲ್ಲಣ ೨೦೬-೧೬
ಪಸ ೧೩೬-೨, ೧೬, ೧೯
ಪಸವು ೧೩೦-೧೨ ; ೧೩೨-೧೦ ; ೧೩೪-೧೯
ಪಳಿಕೆ ೧೪೨-೬
ಪಟಿವೊಟ್ತು ೭೧-೨೮
ಪಟಿ ೫೨-೨೪ ; ೫೪-೩ ; ೫೫-೩೦ ; ೧೨೭-೨೬ ; ೧೩೭-೬ ; ೧೭೬-೧೧ ; ೨೧೧-೬
ಪಟ್ತಿ ೧೨೦-೬
ಪಾಗುಡ ೭೮-೪ ; ೯೨-೨೦ ; ೧೦೫-೧೯ ; ೧೯೩-೩
ಪಾಟ ೯೯-೨
ಪಾನಿಗಟ್ಟು ೧೨೩-೧೨, ೧೦ ; ೧೦೭-೧, ೪
ಪಾಪೆ ೬೩-೧೧
ಪಾರಕು ೧೧೨-೨೬
ಪಾರು ೧೦೮-೨೨
ಪಾರ್ವಂತಿ ೪೯-೨೩ ; ೮೨-೮ ; ೧೨-೧೧ ; ೨೩೪-೧೯
ಪಾವುಕೊಳ್ ೫೭-೯ ; ೫೬-೯
ಪಾಳಿಧ್ವಜ ೨೦೮-೨೪
ಪಾಟಿ ೨೨೯-೧೮
ಪಡಿಪೆಜು ೨೨೬-೧
ಪಿನ್ನ ೧೩೦-೯
ಪಿಟಿ[3] ೨೨೨-೬
ಪಿಟಿಸು ೨೨೩-೭
ಪುಗುಳ್ ೭೩-೧೦
ಪುಟ್ಟಿಗೆ ೧೬೭-೧
ಪುಡಿಕೆ ೧೬೭-೮, ೧೯
ಪುಡುಕುನೀರ್ ೧೮೯-೧೨
ಪುಡುಕೆ ೬೩-೧೧ ; ೨೨೧-೧
ಪುರುಳಿ ೧೪೧-೯
ಪುಳುಂಗಾಜಿ ೧೯೪-೨೨
ಪೆಂಗುರು ೧೪೧-೯
ಪೆಟ್ಟೆ ೭೩-೧೦ ; ೧೮೦-೨
ಪೆಜುಕು ೯೦-೭
ಪೇಪಂದಿ ೫೩-೯ ; ೫೪-೬ ; ೫೭-೫ ; ೬೮-೫
ಪೊಟ್ಟೆಳಿಗೆ ೫೯-೬, ೭, ೭ ; ೬೧-೧೪, ೨೧, ೨೨, ೨೩, ೨೪
ಪೊರೆತಾಪು ೯೫-೨೮
ಪೊಲ್ಲದು ೫೧-೨೦ ; ೬೦-೨೦
ಪೊಲ್ಲವಯುನಸ ೫೮-೨೮
ಪೊಲ್ಲಮಾನಸಿ ೬೦-೫, ೨೮
ಪೊಲ್ಲಮೆ ೫೭-೧ : ೮೭-೧೦ ; ೧೪೦-೨೪ ; ೨೧೧-೬ ; ೨೩೧-೭
ಪೋಜಿಸು ೧೭೮-೮
ಪೊಟ್ತು ೧೪೭-೩೦ ; ೧೪೮-೬, ೮
ಪೊಟ್ತುಡು ೧೨೩-೧೮
ಪೊಟ್ತುಡೆ ೨೦೪-೧

ಪೋಗಿಡು ೧೪೦-೨೪
ಪೋಡುಂಗಾಱ ೨೦೨-೮, ೧೩ ; ೨೦೫-೧
ಪೋರು ೧೬೧-೨೨
ಪೋೞ್ ೯-೧೯, ೧೯, ೬೪-೨೭

ಬಂಡ ೧೨೦-೧೪
ಬಂಡಾರ ೬೬-೭
ಬಗ್ಗಿಸು ೧೪೪-೮
ಬಚ್ಚ (ರ) ೧೬೭-೪
ಬಟ್ಟು ೧೧೭-೨೩, ೨೪, ೨೫ ; ೧೧೮-೧, ೧
ಬಟ್ಟೆಯ ಕಣ್ ೨೦೨-೧೨
ಬತ್ತಲಿಗ ೬೬-೨೨
ಬದ್ದವಣದ ಪಱೆ ೧೭೫-೨೧ ; ೧೭೭-೨೧
ಬಯ್ಗು ೭೩-೨೫
ಬರ್ದು ೬೧-೩ ; ೯೩-೫ ; ೯೫-೭ ; ೧೩೪-೨೨ ; ೨೦೮-೪
ಬರ್ದುಂಕು ೨೩೨-೧೦
ಬರ್ದುಂಕಿಸು ೨೦೯-೧೭
ಬಱಸಿಡಿಲ್ ೮೦-೨೪
ಬೞಿ ೧೯೨-೧, ೨
ಬೞಿಯಟ್ಟು ೪೬-೧೮, ೨೧ ; ೨೧೨-೧
ಬೞಿವೞಿ ೧೨೨-೧, ೨. ೨೬ ; ೧೫೨-೨೨ ; ೧೯೪-೨
ಬೞ್ಚ ೧೦೯-೬ ; ೧೫೨-೭, ೧೧ ; ೨೦೮-೧೫
ಬೞ್ದ ೫೩-೮, ೧೬೦-೧೧, ೨೨, ೨೪
ಬಾಗಿಲ್ಮಾಡ ೧೨೪-೧೬
ಬಾಡು ೧೨೨-೧೬
ಬಾತಿರು ೬೨-೨೦
ಬಾದಣಾ ೨೩೦-೧೪
ಬಾಲವದ್ದೆ ೮೯-೧೦ ; ೧೫೭-೬
ಬಾವರಿ ೯೦-೨೯
ಬಾೞಿವಾೞಿ ೧೬೪-೧೬ ; ೧೬೮-೨೨ ; ೧೯೫-೪
ಬಾೞ್ತೆ ೧೧೩-೨೫, ೨೯; ೨೫೮-೨೫; ೧೩೨-೪,೩
ಬಿಚ್ಚಳಿಸು ೪೮-೨೬ ; ೨೨೬-೬
ಬಿಚ್ಚುವ ೨೩೨-೧೧
ಬಿದಿರ್ ೨೩೨-೨೦
ಬಿದಿರ್ ೫೨-೨೬
ಬಿರ್ದು ೬೨-೧೨, ೧೭, ೨೪, ೨೬ ; ೬೩-೨೦ ; ೨೩೨-೧೭, ೨೦ ; ೨೩೩-೧೨
ಬಿರ್ದು ೨೦೭-೧೮
ಬರುಂಟು ೬೧-೨೩
ಬೆಂಟೆ ೧೯೭-೧೦, ೧೧ ; ೧೯೮-೫
ಬೆಸಲೆ ೧೫೬-೮, ೧೩, ೧೯, ೨೧ ; ೨೦೩-೧೪ ; ೨೩೦-೨೨
ಬೆಳ್ಕಾಡು ೧೫೬-೩
ಬೆಳ್ಗತ್ತೆ ೬೮-೫
ಬೆಳ್ಗೊಡೆ ೨೦೮-೨೯
ಬೇನೆ ಮೂಡು ೬೬-೨೬
ಬೇಡು ೧೫೭-೨೨
ಬೈಕಂಗುಳಿ ೯೦
ಬೈಕಂದಿಂ ೪೭-೧, ೨೦ ; ೪೮-೧೪ ; ೧೨೦-೨೧ ; ೧೬೮-೬
ಬೊಡ್ಡಣಬಾವಿ ೧೮೦-೨೨ ; ೧೮೨-೨೨

ಭಂಡ ೧೧೫-೬, ೧೮, ೨೫
ಭಂಡಾರ ೭೦-೧೯
ಭಾಗಸ ೬೧-೧೯

ಮಟ್ಟ ೨೨೭-೧೪
ಮಡು ೮೦-೨೧
ಮದವಕ್ಕಳ್ ೮೪-೨೫, ೨೭
ಮದೆವಳ್ ೬೦-೨೩
ಮದೆವಳ ೬೧-೫, ೧೦
ಮರಮೊಗ ೧೬೨-೧೪
ಮಲರ್ಚು ೮೫-೨೭
ಮಲ್ಲಲ್ ೨೨೬-೯
ಮಲ್ಲಲ ಕೂೞ ೨೨೬-೧೦, ೧೫, ೨೧
ಮಱಲುಂದು ೮೦-೨೫ ; ೮೩-೧ ; ೧೬೧-೧೨
ಮಱುಗು ೬೧-೧೭, ೩೩ ; ೬೩-೯; ೧೦೭-೧೪
ಮಱುಭವ ೯೯-೨೫
ಮಱುವಕ್ಕ ೧೦೬-೧೩
ಮಱುಸೂೞ್ ೭೮-೯
ಮಱೆವಾೞ್ ೬೫-೧೮; ೧೭೦-೧೬ ; ೨೨೫-೧೧
ಮಾಸು ೧೧೦-೩
ಮಾಱುಗೊಳ್ ೫೮-೧೯
ಮಿಳಿ ೫೨-೨೬
ಮುಂಜಿಗಟ್ಟು ೧೦೭-೨೦
ಮುಂಜಿಬಂಧನ ೧೧೭-೨೧
ಮುಂತಿಡು ೧೦೪-೨೬

ಮುಚ್ಚೆಪಡು ೭೪-೫
ಮುಟ್ಟಿ ೧೭೧-೧೪
ಮುಟ್ಟಿಗೆ ೧೪೦-೨೮
ಮುಟ್ಟು ೫೦-೧೩
ಮುಟ್ಟುಗಿಡು ೯೦-೧೩
ಮುಯ್ಯು ೧೩೬-೧೭
ಮುಸುಜು ೫೭-೨೫
ಮೆಯ್ಯಜಿ ೬೧-೨೦
ಮೆಲ್ಲಿದು ೫೫-೨೮
ಮೊಕ್ಕನೆ ೧೦೫-೧೨ ; ೧೬೫-೮
ಮೊಗಪೆ ೨೨೬-೧೦
ಮೊಗವಡ ೨೧೧-೩
ಮೊಗೆ ೨೩೧-೧೧, ೧೭
ಮೊಟ್ಟಯಿಸು ೧೯೦-೪
ಮೊಡೆನಾಜು ೨೩೧-೮
ಮೊಜಿ ೮೫-೭ ; ೧೯೩-೧೪ ; ೨೦೭-೫
ಮೊಜಿಂಯುಂ ೧೬೨-೨೫ ; ೧೬೩-೧
ರೂಪುಗರಿ ೧೬೮-೯

ಲಂಗಿಗ ೧೨-೨೬ ; ೫೪-೫ ; ೫೭-೩
ಲಟಹ ೨೩೪-೧೫
ಲವಟು ೧೩೬-೧೫
ಲಾಂತವ ೧೯೧-೩
ಲಾವಣಿಗೆ ೧೨೨-೧೬
ಲುಂದು ೬೩-೨ ; ೭೨-೭
ಲುಂದುವೋವರಿ ೧೬೭-೧೧
ಲುಂದುವೋವರಿಗೆ ೧೬೭-೮
ವಕ್ಖ್ಯಾಣಿಸು ೬೭-೨೮ ; ೧೨೮-೭ ; ೧೪೫-೮
ವಣ್ಖ್ಯಾಣಿಸು ೪೮-೨೫, ೨೯ ; ೫೦-೧೧, ೧೩ ; ೫೧-೧೩ ; ೧೭೭-೬
ವಣ್ಣಂಚಳಿ ೧೬೯-೨೫
ವಸಿಯಿಸು ೧೫೧-೨೮
ಪಾರಕ ೪೯-೧೦
ಪಾರಿಸು ೧೪೩-೧೮
ಪೇಸರಿಗಟ್ತು ೧೨೪-೧೦
ಸಂಜೆಪಾರಿಸು ೪೯-೩
ಸಾದು ೬೫-೭
ಸಾರ ೨೨೪-೨೦
ಸಾರಬೀದಿ ೨೨೧-೧೧
ಸಾಲಿಗ ೨೩೨-೧೬, ೧೭ ; ೨೩೩-೧೧
ಸಿಬಿಗೆ ೧೨೪-೧೯
ಸೀಂಟು ೧೧೩-೧೫
ಸೀನಾರ್ಯಿ ೧೪೧-೪
ಸುರಖ ೧೭೨-೫
ಸೂರುಳ್ ೮೮-೧೦
ಸೂರುಳಿಸು ೯೦-೨೫
ಸೆಡೆ ೨೩೫-೨೬
ಸೋಪಾರ್ ೮೫-೯
ಸೊಪ್ಪುನಾರಾಗಿ ಬಡಿ ೧೯೭-೨
ಸೋಂಕಿಲ್ ೮೮-೨೧, ೨೫, ೨೫ : ೨೦೩-೯
ಸೋದಿಗೆ ೧೨೨-೧೬
ಸೋರೆ ೨೩೧-೧೩, ೧೭
ಸೋಲ ೫೮-೫
ಹತತ್ತವಿತತ್ತಕೋಳಾಹಳ ೧೦೭-೧೧

(೬) ಪವಯಣ ಕುಸಲ (ಪ್ರವಚನಕುಶಲ), (೭) ಮಇಪ್ಪಗಬ್ಭೇಣ (ಬುದ್ಧಿಯಲ್ಲಿ ಪ್ರೌಢಿಮೆ).

**ಕಷಾಯ** ೭೮—ಕ್ರೋಧ, ಮಾನ, ಮಾಯ, ಲೋಭಗಳು.

**ಕಾಯೋತ್ಸರ್ಗ** ೯೨—ಶರೀರಾದಿಗಳ ಮಮತೆಯನ್ನು ತೊರೆದು ಆತ್ಮವನ್ನು ಸಮಾಧಿಮಾಡಿ ಕೊಳ್ಳುವುದು.

**ಕ್ಷಪಕಶ್ರೇಣಿ** ೧೭೮—ಗುಣಸ್ಥಾನಗಳಲ್ಲಿ ಜೀವ ಉನ್ನತಿ ಹೊಂದುತ್ತಾ ಹೋಗುವಾಗ ಯಾವುದು ಚಾರಿತ್ರ ಮೋಹನೀಯಗಳ ನಾಶಮಾಡುತ್ತದೋ ಅದು. ಕ್ಷಪಕಶ್ರೇಣಿಯನ್ನು ಏರುವವನು ೧೧ನೆಯ ಗುಣಸ್ಥಾನವನ್ನು ಸ್ಪರ್ಶಿಸುವುದಿಲ್ಲ.

**ಖೇಳೋಷಧಿ ಋದ್ಧಿ** ೧೧೩—ತಪಋದ್ಧಿಗಳಲ್ಲಿ ಒಂದು. ಯತಿಯ ಎಂಜಲಿನಿಂದ ರೋಗ ಪರಿಹಾರ ವಾಗುವುದು.

**ಗುಣಸ್ಥಾನ** ೧೯೮—ಸಂಸಾರದಲ್ಲಿ ಸಿಕ್ಕು ಮಿಥ್ಯಾತ್ವದಲ್ಲಿ ಮುಳುಗಿರುವ ಜೀವ ಕರ್ಮಕ್ಷಯ ಮಾಡಿಕೊಂಡು ಮೇಲೇರುವಾಗ ೧೪ ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳೇ ಗುಣಸ್ಥಾನಗಳು. ಕರ್ಮದ ಉದಯ, ಉಪಶಮ, ಶಾಂತ, ಕ್ಷಯ, ಕ್ಷಯೋಪಶಮಗಳಿಂದ ಉಂಟಾಗುವ ಜೀವದ ಸ್ಥಿತಿಗೆ ಗುಣಸ್ಥಾನವೆಂದು ಹೆಸರು.

**ಗೋಚಾರನಿಯಮ** ೧೨೩, ೧೭೫—ಸಾಧುವಿನ ಭಿಕ್ಷಾಕ್ರಮ. ಆಹಾರಕ್ಕಾಗಿ ಹಸುವು ಮೇವ ರೀತಿ. ಸೌಂದರ್ಯಗಳನ್ನು ಲಕ್ಷಿಸದೆ ಚಲಿಸುವಂತೆ ಸಂನ್ಯಾಸಿ ಭಿಕ್ಷವನ್ನು ಮಾತ್ರ ಗಮನಿಸಬೇಕು. ದಾತಾರನನ್ನಾಗಲಿ ಅವನ ಐಶ್ವರ್ಯವನ್ನಾಗಲಿ ಗಣಿಸಬಾರದು.

**ಘಾತಿಕರ್ಮ** ೧೫೮, ೧೯೮—ಘಾತಿಕರ್ಮಗಳು ೪. ಜೀವಕ್ಕೆ ಸಹಜವಾದ ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ನಾಲ್ಕು ಅನಂತಗುಣಗಳಿಗೆ ಘಾತಿ ಉಂಟುಮಾಡುವ ಕರ್ಮ. ಅವು (೧) ಜ್ಞಾನಾವರಣೀಯ—ಅನಂತಜ್ಞಾನವನ್ನು ಆವರಿಸುವುದು. (೨) ದರ್ಶನಾವರಣೀಯ—ಅನಂತದರ್ಶನವನ್ನು ಆವರಿಸುವುದು. (೩) ಅಂತರಾಯ—ಅನಂತವೀರ್ಯವನ್ನು ಆವರಿಸುವುದು, (೪) ಮೋಹನೀಯ—ಜೀವವನ್ನು ಮೋಹಗೊಳಿಸಿ ಅನಂತಸುಖವನ್ನು ಮರೆಸುವುದು. ಘಾತಿಕರ್ಮಗಳು ಜೀವವನ್ನು ಸಂಸಾರದಲ್ಲಿ ಸಿಲುಕಿಸುತ್ತವೆ.

**ಘೋರತಪ** ೧೧೩—ಭಯಾನಕ ಸ್ಥಳದಲ್ಲಿ ರೋಗಾದಿಗಳುಂಟಾದರೂ ತಪಸ್ಸು ಮಾಡುವುದು.

**ಚತುರ್ನಿಕಾಯಾಮರ** ೩೦—ಭವನಪತಿ, ವ್ಯಂತರಿಕ, ಜ್ಯೋತಿಷ್ಕ ಮತ್ತು ವಿಮಾನವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳು.

**ಚತುರ್ದಶಪೂರ್ವಗಳು** ೯೩—ದ್ವಾದಶಾಂಗಗಳಲ್ಲಿ ೧೨ನೆಯ ದೃಷ್ಟಿವಾದಾಂಗಕ್ಕೆ ಮೂಲವಾಗಿದ್ದು ಈಗ ಕಾಣೆಯಾಗಿರುವ ೧೪ ಪೂರ್ವಗಳು: (೧) ಉತ್ಪಾದ ಪೂರ್ವ, (೨) ಅಗ್ರಾಯಣೀ ಪೂರ್ವ, (೩) ವೀರ್ಯಾನುವಾದ ಪೂರ್ವ, (೪) ಅಸ್ತಿನಾಸ್ತಿಪ್ರವಾದ ಪೂರ್ವ, (೫) ಜ್ಞಾನಪ್ರವಾದ ಪೂರ್ವ, (೬) ಸತ್ಯಪ್ರವಾದ ಪೂರ್ವ, (೭) ಆತ್ಮಪ್ರವಾದ ಪೂರ್ವ, (೮) ಕರ್ಮಪ್ರವಾದ ಪೂರ್ವ, (೯) ಪ್ರತ್ಯಾಖ್ಯಾನವಾದ ಪೂರ್ವ, (೧೦) ವಿದ್ಯಾನುವಾದ ಪೂರ್ವ, (೧೧) ಕಲ್ಯಾಣವಾದ ಪೂರ್ವ, (೧೨) ಪ್ರಾಣಾವಾದ ಪೂರ್ವ, (೧೩) ಕ್ರಿಯಾ ವಿಶಾಲ ಪೂರ್ವ, (೧೪) ತ್ರಿಲೋಕ ಬಿಂದುಸಾರ ಪೂರ್ವ.

**ಚಾರಣರಿಸಿಯರ್** ೧೦೬—ಆಕಾಶದಲ್ಲಿ ಸಂಚರಿಸುವ ಮುನಿ.

**ಜಲ್ಲೋ(ಲ್ಲೋ)ಷಧಿಋದ್ಧಿ** ೧೧೩—ಹತ್ತು ತಪಸ್ಸಿದ್ಧಿಗಳನ್ನು ಪಡೆದವನಿಗೆ ಉಂಟಾಗುವ ಸಿದ್ಧಿ. ತಪಋದ್ಧಿಗಳಲ್ಲಿ ಒಂದು. ಸಾಧುವಿನ ಬೆವರಿನ ಸ್ಪರ್ಶದಿಂದ ರೋಗ ಪರಿಹಾರವಾಗುವುದು.

**ಜಿನಕಲ್ಪ** ೧೫೭—ಏಕವಿಹಾರಿಯಾದ ಜೈನ ಸಾಧು ಸಂಪ್ರದಾಯ.

**ದೀಪ್ತತಪ** ೧೧೩—ಅನೇಕ ಉಪವಾಸಗಳ ಅನಂತರವೂ ಶರೀರದ ಕಾಂತಿ ಕುಂದದಿರುವುದು. ಮುಖದಲ್ಲಿ ದುರ್ಗಂಧ ಬರದಿರುವುದು.

**ದ್ವಾದಶವಿಧತಪ** ೯೫—ಕರ್ಮನಿರ್ಜರೆಗೆ ಸಾಧನವಾದ ತಪಸ್ಸುಗಳು ೧೨. ಅವು ಎರಡು ವಿಧ: (೧) ಬಾಹ್ಯ, (೨) ಅಭ್ಯಂತರ.

**ಬಾಹ್ಯತಪಗಳು** ೬: (೧) ಅನಶನ (ಆಹಾರವಿಲ್ಲದೆ ತಪಸ್ಸು ಮಾಡುವುದು), (೨) ಅವಮೋದರ್ಯ (ಹೊಟ್ಟೆ ತುಂಬುವುದಕ್ಕಿಂತ ಕಡಮೆ ತೆಗೆದುಕೊಳ್ಳುವುದು), (೩) ವೃತ್ತಿಸಂಖ್ಯಾನ (ನಿರ್ದಿಷ್ಟ ರೀತಿಯಲ್ಲಿ ಮಾತ್ರ ಭಿಕ್ಷೆ ಮಾಡುವುದಾಗಿ ಮಿತಿಹಾಕಿಕೊಳ್ಳುವುದು), (೪) ರಸತ್ಯಾಗ (ಹಾಲು, ಮೊಸರು ಮೊದಲಾದ ರಸಗಳ ಪ್ರಿಯಪದಾರ್ಥಗಳನ್ನು ಬಿಡುವುದು), (೫) ಕಾಯ ಕ್ಲೇಶ (ಗಾಳಿ, ಮಳೆ, ಬಿಸಿಲುಗಳಲ್ಲಿ ದೇಹವನ್ನು ದಂಡಿಸಿ ತಪಸ್ಸು ಮಾಡುವುದು), (೬) ವಿವಿಕ್ತಶಯನಾಸನ (ಏಕಾಂತವಾಗಿ ಕೂರುವುದು, ಮಲಗುವುದು ಈ ಬಗೆಯ ತಪಸ್ಸು).

**ಅಭ್ಯಂತರ ತಪಸ್ಸು** ೬: (೧) ಪ್ರಾಯಶ್ಚಿತ್ತ (ಮಾಡಿದ ತಪ್ಪನ್ನು ಒಪ್ಪಿಕೊಂಡು ಶಿಕ್ಷೆಯನ್ನು ಅನುಭವಿಸುವುದು), (೨) ವಿನಯ (ಜ್ಞಾನದರ್ಶನ ಚಾರಿತ್ರಗಳಲ್ಲಿ ಹಿರಿಯರಿಗೆ ವಿನಯವಾಗಿರುವುದು), (೩) ವೈಯಾವೃತ್ಯ—ವೃದ್ಧರೂ ಅಶಕ್ತರೂ ರೋಗಿಷ್ಠರೂ ಆದ ಯತಿಗಳ ಸೇವೆ ಮಾಡುವುದು, (೪) ಸ್ವಾಧ್ಯಾಯ (ಆಗಮ ಗ್ರಂಥಗಳನ್ನು ಅಭ್ಯಾಸ ಮಾಡುವುದು), (೫) ವ್ಯುತ್ಸರ್ಗ (ಶರೀರದ ಮೇಲಣ ಆಸೆಯನ್ನು ಬಿಟ್ಟು ಸಮಚಿತ್ತದಿಂದಿರುವುದು, (೬) ಧ್ಯಾನ.

**ದ್ವಾದಶಾಂಗಗಳು** ೯೩—(೧) ಆಚಾರಾಂಗ—ಯತಿಯ ನಡವಳಿಕೆಯನ್ನು ತಿಳಿಸುತ್ತದೆ (೨) ಸೂತ್ರಕೃತಾಂಗ—ಜ್ಞಾನ, ವಿನಯ, ಧಾರ್ಮಿಕಕ್ರಿಯೆ ಮೊದಲಾದುವನ್ನು ತಿಳಿಸುತ್ತದೆ. (೩) ಸ್ಥಾನಾಂಗ—ಜೀವಪುದ್ಗಲ ಮೊದಲಾದ ದ್ರವ್ಯಗಳ ಸ್ಥಾನವನ್ನು ತಿಳಿಸುತ್ತದೆ. (೪) ಸಮವಾಯಾಂಗ—ದ್ರವ್ಯ ಕಾಲ ಕ್ಷೇತ್ರ ಭಾವಗಳ ವ್ಯಕ್ತಿಭೇದಗಳಿಂದ ತೋರುವ ಸಾಮ್ಯವನ್ನು ತಿಳಿಸುತ್ತದೆ. (೫) ವ್ಯಾಖ್ಯಾಪ್ರಜ್ಞಪ್ತಿ—ಗಣಧರರ ಪ್ರಶ್ನೆಗಳಿಗೆ ತೀರ್ಥಂಕರರ ಉತ್ತರಗಳನ್ನು ತಿಳಿಸುತ್ತದೆ. (೬) ಜ್ಞಾತೃಧರ್ಮಕಥಾಂಗ—ಧಾರ್ಮಿಕ ಕಥೆ, ಗಣಧರ ತೀರ್ಥಂಕರರ ಸಂವಾದವಿದೆ. (೭) ಉಪಾಸಕಾಧ್ಯಯನಾಂಗ—ಶ್ರಾವಕಾಚಾರಗಳನ್ನು ತಿಳಿಸುತ್ತದೆ. (೮) ಅಂತಕೃದ್ದಶಾಂಗ—ಪ್ರತಿ ತೀರ್ಥಂಕರರ ಕಾಲದಲ್ಲಿಯೂ ಉಪಸರ್ಗವನ್ನು ಸಹಿಸಿ ತಪಸ್ಸುಮಾಡಿದ ಹತ್ತು ಹತ್ತು ಮುನಿಗಳ ಚರಿತ್ರೆಯಿದೆ. (೯) ಅನುತ್ತರೋಪಪಾದಿಕ ದಶಾಂಗ—ಪ್ರತಿ ತೀರ್ಥಂಕರರ ಕಾಲದಲ್ಲಿಯೂ ತಪಸ್ಸಿನಿಂದ ಐದು ಅನುತ್ತರಗಳಲ್ಲಿ ಹುಟ್ಟಿದ ಹತ್ತು ಹತ್ತು ಮುನಿಗಳ ಚರಿತ್ರೆಯಿದೆ. (೧೦) ಪ್ರಶ್ನವ್ಯಾಕರಣಾಂಗ—ಪ್ರಾಣಿಗಳ ಸುಖದುಃಖದ ಪ್ರಶ್ನೆಗಳಿಗೆ ಉತ್ತರವಿದೆ. (೧೧) ವಿಪಾಕಸೂತ್ರಾಂಗ—ಕರ್ಮಗಳ ಪರಿಪಾಕ ಸ್ವರೂಪವನ್ನು ತಿಳಿಸುತ್ತದೆ. (೧೨) ದೃಷ್ಟಿಪ್ರವಾದಾಂಗ—ಬೇರೆ ಬೇರೆ ದರ್ಶನಗಳನ್ನು ವಿವರಿಸಿ ಸಮ್ಯಗ್ ದರ್ಶನವನ್ನು ತಿಳಿಸುತ್ತದೆ. ಇಲ್ಲಿ ಚತುರ್ದಶ ಪೂರ್ವಗಳೂ ಸೇರಿವೆ.

**ನಂದೀಶ್ವರ** ೧೫೧—ನಂದೀಶ್ವರದಲ್ಲಿ ಸೌಧರ್ಮಾದಿ ಇಂದ್ರರ ಸಾನ್ನಿಧ್ಯದಲ್ಲಿ ಮಾಡುವ ಪೂಜೆ. ಇದನ್ನು ಕಾರ್ತಿಕ, ಫಾಲ್ಗುಣ, ಆಷಾಢಗಳ ಅಂತ್ಯಭಾಗಗಳಲ್ಲಿ ಮಾಡುವುದು.

**ಧರ್ಮಧ್ಯಾನ** ೬೧—ಧರ್ಮಸ್ವರೂಪವನ್ನು ಯಾವಾಗಲೂ ಚಿಂತಿಸುತ್ತಿರುವುದು.

**ನವಪದಾರ್ಥಗಳು**—ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ.

**ನಿಶ್ಶಲ್ಯಗಳು** ೮೫—ಮಾಯಾ (ಕಪಟ), ಮಿಥ್ಯಾ (ಶ್ರದ್ಧೆಯ ಅಭಾವ), ನಿಧಾನ (ಭೋಗಾಕಾಂಕ್ಷೆ) ಗಳೆಂಬ ಶಲ್ಯಗಳಿಲ್ಲದಿರುವುದು.

**ಪಂಚಮಹಾಪಾತಕ** ೧೫೦—ಬಾಲವಧೆ, ಸ್ತ್ರೀವಧೆ, ಗೋವಧೆ, ಋಷಿವಧೆ, ಬ್ರಾಹ್ಮಣವಧೆ.

**ಪಂಚಾಸ್ತಿಕಾಯಗಳು**—ಕಾಲವನ್ನುಳಿದ ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶಗಳು.

**ಪಂಚಾತಿಚಾರನಿಯಮ** ೧೨೬—ಜರಗೆಯಿಂದ ಹಿರಿರಾಗಿ ಬಾರಿಯಲ್ಲಾಗಿದ್ದ ಅತಿಚಾರಗಳ ಶುದ್ಧಿಗೆ ಮಾಡಬೇಕಾದ ನಿಯಮ.

**ಪಡಿಕಮಣ** ೫೦, ೭೨—೧೫ ಪ್ರಕೀರ್ಣಕಗಳಲ್ಲಿ ನಾಲ್ಕನೆಯದು. ಹಿಂದೆ ಮಾಡಿದ ದೋಷಗಳಿಗೆ

ಆತ್ಮನಿಗೆ ಅಹಿತವನ್ನುಂಟುಮಾಡುವ ಪದಾರ್ಥಗಳನು ತಿಳಿಯಬಲ್ಲುದಲ್ಲದೆ ಇತರ ಪದಾರ್ಥಗಳ ಸ್ವರೂಪವನ್ನು ಅರಿಯದು.

**ವೀಚಿಮರಣ** ೧೧೨—ಅಲೆಯು ಎದ್ದು ಬಿದ್ದು ನಾಶವಾಗುವಂತೆ ನಿರಂತರವಾದ ಮರಣವನ್ನು ಹೊಂದುವಿಕೆ. ಮನುಷ್ಯರ ಆಯುಸ್ಸು, ತೇಜಸ್ಸುಗಳು ನಿರಂತರವಾಗಿ ಕುಂದುತ್ತಿರುವುದು.

**ವ್ಯಂತರದೇವ** ೮೫—ಬೇರೆ ಬೇರೆ ದೇಶಗಳಲ್ಲಿ ಯಾರು ಇರುವರೋ ಆ ದೇವತೆಗಳು. ಇವರು ಎಂಟು ಬಗೆ: (೧) ಕಿನ್ನರ, (೨) ಕಿಂಪುರುಷ, (೩) ಮಹೋರಗ, (೪) ಗಂಧರ್ವ, (೫) ಯಕ್ಷ, (೬) ರಾಕ್ಷಸ, (೭) ಭೂತ, (೮) ಪಿಶಾಚ.

**ಶಂಕಾದ್ಯಷ್ಟಮಲಂಗಳು** ೫೦—ಶಂಕಾ, ಆಕಾಂಕ್ಷಾ, ವಿಚಿಕಿತ್ಸಾ, ಅನ್ಯದೃಷ್ಟಿ ಪ್ರಶಂಸಾ, ಸಂಸ್ತವಾ, ಸಮ್ಯಗ್‌ದೃಷ್ಟಿ, ಅತಿಚಾರಗಳು.

**ಶುಕ್ಲಧ್ಯಾನ** ೭೩—ಶುಚಿತ್ವ ಸಮೇತವಾದದ್ದು ಶುಕ್ಲಧ್ಯಾನ. ಧರ್ಮಧ್ಯಾನವನ್ನು ಮುಗಿಸಿ ಮುಕ್ತಿ ಹೊಂದುವುದನ್ನು ಕುರಿತು ಚಿಂತಿಸುವುದು. ಶುಕ್ಲಧ್ಯಾನವು ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾಗುತ್ತದೆ.

**ಷಡ್ದ್ರವ್ಯಗಳು** ೫೦—ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ.

**ಸಪ್ತವ್ಯಸನ** ೪೭—ದ್ಯೂತಕ್ರೀಡೆ, ವೇಶ್ಯಾಸೇವನೆ, ಪರಸ್ತ್ರೀಗಮನ, ಚೌರ್ಯಕರ್ಮ, ಮಾಂಸ ಭಕ್ಷಣ, ಮದ್ಯಪಾನ, ಬೇಟೆಯಾಡುವುದು.

**ಸಮಾಧಿಮರಣ** ೮೯—ಅನ್ನ ಕಷಾಯ ಮುಂತಾದವುಗಳನ್ನು ತ್ಯಾಗಮಾಡಿ ರತ್ನತ್ರಯಗಳಲ್ಲಿ ಸ್ಥಿರನಾಗಿ ಪ್ರಾಣತ್ಯಾಗ ಮಾಡುವ ಕ್ರಮ.

**ಸಮ್ಯಕ್ತ್ವ** ೫೭—ಜೈನಮತದ ಸಮ್ಯಗ್‌ದರ್ಶನಾದಿ ತತ್ತ್ವಗಳ ಸತ್ಯತ್ವದಲ್ಲಿ ಸಂಪೂರ್ಣವಾದ ನಂಬಿಕೆಯಿರುವುದು. ಮಿಥ್ಯಾತ್ವಕ್ಕೆ ವಿರುದ್ಧವಾದದ್ದು.

**ಸರ್ವಾರ್ಥಸಿದ್ಧಿ** ೪೫—೨೭ ಅನುತ್ತರವಿಮಾನಗಳಲ್ಲಿ ಎಲ್ಲಕ್ಕೂ ಮೇಲಿರುವುದು ಮತ್ತು ಅತ್ಯುತ್ತಮವಾದದ್ದು.

**ಸರ್ವೌಷಧಿಋದ್ಧಿ** ೧೧೩—ಹತ್ತು ತಪಸ್ಸಿದ್ಧಿಗಳನ್ನು ಪಡೆದವರಿಗೆ ಒದಗುವ ಮಹಿಮೆ. ಸಾಧುವಿನ ಅಂಗಸ್ಪರ್ಶ, ಉಸಿರು, ಮಲಮೂತ್ರಗಳೆಲ್ಲಾ ರೋಗನಾಶಕವಾಗಿರುವುದು.

**ಸಿಂಹನಿಷ್ಕ್ರೀಡಿತ** ೨೧೬—೮೦ ದಿನದಲ್ಲಿ ೬೦ ಉಪವಾಸ ಮತ್ತು ೨೦ ಪಾರಣೆಗಳನ್ನು ಮಾಡುವ ವ್ರತ.

**ಸಿದ್ಧಗುಣ** ೫೦—ಮುಕ್ತಜೀವರಿಗಿರುವ ಎಂಟು ಗುಣಗಳು: (೧) ಸಮ್ಯಕ್ತ್ವ, (೨) ಅನಂತದರ್ಶನ, (೩) ಅನಂತಜ್ಞಾನ, (೪) ಅನಂತವೀರ್ಯ, (೫) ಸೂಕ್ಷ್ಮತ್ವ, (೬) ಅವಗಾಹಿತ್ವ, (೭) ಅವ್ಯಾಬಾಧತ್ವ ಮತ್ತು (೮) ಅಗುರುಲಘುತ್ವಗಳು.

**ಸಿದ್ಧಸ್ವರೂಪ** ೫೧—ಆತ್ಮವು ೮ ಕರ್ಮಗಳನ್ನು ನಾಶಪಡಿಸಿ ೮ ಗುಣಗಳನ್ನು ಪ್ರಕಟಪಡಿಸುವುದು. ದೇಹರಹಿತವಾಗಿ ಪುರುಷಾಕಾರವು ಲೋಕಶಿಖರದ ಮೇಲೆ ವಿರಾಜಮಾನವಾಗಿರುವುದು. ನಿತ್ಯ ಜ್ಞಾನಾನಂದದಲ್ಲಿ ಮಗ್ನವಾಗಿ ಸಾಧ್ಯವಿದ್ದುದನ್ನು ಸಾಧಿಸುವುದು. ಪೂರ್ಣ ಕೃತಕೃತ್ಯವಾಗಿ, ಅವಿನಾಶಿಯಾಗಿ, ಸ್ವಭಾವದಲ್ಲಿ ಸದಾ ತಲ್ಲೀನವಾದುದು.

**ಸ್ಪರ್ಶೌಷಧಿ**—ಆಮರ್ಶೌಷಧಿ. ಯತಿಯ ಸ್ಪರ್ಶದಿಂದ ರೋಗ ಪರಿಹಾರವಾಗುವಂಥದು.

**ಸಾಮಾನಿಕದೇವ** ೬೮—ಇಂದ್ರನಿಗಿರುವ ಆಜ್ಞೆ, ಐಶ್ವರ್ಯ, ಶಕ್ತಿಗಳಿಲ್ಲದೆ ಆಯುಸ್ಸು, ವೀರ್ಯ, ಪರಿವಾರ, ಭೋಗೋಪಭೋಗಾದಿ ಶಕ್ತಿಗಳಿಂದ ಇರುವಂಥವರು, ಗುರು, ತಂದೆ, ಉಪಾಧ್ಯಾಯರಂತೆ ಪೂಜ್ಯರಾದ ದೇವರುಗಳು ಸಾಮಾನಿಕ ದೇವರು.

**ಸ್ಥವಿರವಿಕಲ್ಪ** ೧೩೭—ಏಕಾಂಗವಿಹಾರಿಯಾಗಲಾರದೆ ಋಷಿ ಸಂಘದಲ್ಲಿದ್ದು ಸಂಘದ ರೀತಿ ಅಥವಾ ಪರಂಪರಾಗತ ರೀತಿಯನ್ನು ತಿಳಿಸುವ ಸಾಧು.

# ೫. ಉದ್ಧೃತ ಪದ್ಯಗಳ ಅಕಾರಾದಿ

## (i) ಪ್ರಾಕೃತ


| | |
|---|---|
| ಅಚ್ಛಣಿಮೀಳಣ | ೧೭೦, ೨೧೪ |
| ಅಟ್ಠಹಿ ಥಣ್ಣಂ | ೧೭೬ |
| ಅರುಜಮಮರಣಂ | ೨೦೦—ಮೂಲಾ ೧೨-೧೪೫ |
| ಅಹಾರಣಿಮಿತ್ತಂ | ೧೮೭—ಮೂಲಾ ೨-೮೨ |
| ಉಡ್ಢಮಹೋತಿರಿಯಮ್ಹಿ ಯ | ೧೮೬—ಮೂಲಾ ೮೨-೭೫ |
| * ಉಣ್ಹಂ ವಾದಂ | ೧೫೪—ಭ. ಆ. ೧೫೪೮ |
| ಎಕ್ಕಂಪಂಡಿಯ | ೧೮೬—ಮೂಲಾ ೨-೭೭, ೩-೧೧೭ |
| ಎಕ್ಕಂಮ್ಮಿ ಭವಗ್ಗಹಣೇ | ೧೮೮—ಮೂಲಾ ೩-೧೧೮ |
| ಏಗೋಯ ಮರದಿ | ೧೫೫—ಮೂಲಾ ೨-೪೭ |
| ಏದಂ ಸರೀರಮಸುಚಿಂ | ೧೭೬—ಮೂಲಾ ೯-೭೮ |
| ಏದಾರಿಸೇ ಸರೀರೇ | ೧೭೬—ಮೂಲಾ ೯-೮೪ |
| ಏಸೋ ಪಂಚಣ | ೧೮೮—ಮೂಲಾ ೭-೧೩ |
| * ಓಮೋದರಿಏ | ೧೧೭—ಭ. ಆ. ೧೫೪೪ |
| * ಕಚ್ಛುಜರಖಾಸ | ೯೭—ಭ. ಆ. ೧೫೪೨ |
| * ಕಾಕಂದಿ ಅಭಯ | ೧೬೪—ಭ. ಆ. ೧೫೫೦ |
| * ಕಿಂಪುಣ ಅಣಗಾರ | ೨೩೮—ಭ. ಆ. |
| * ಕೋಸಂಬೀ ಲಲಿತಘಟಾ | ೧೩೯—ಭ. ಆ. ೧೫೪೫ |
| * ಖಮ್ಮಾಮಿ ಸವ್ವಜೀವಾಣಂ | ೯೨—೧೫೩ |
| | ೧೭೭, ೧೯೮, ೧೩೬—ಮೂಲಾ ೨-೯೩ |
| * ಗಾಢಪ್ಪಹಾರ ವಿದ್ಧೋ | ೨೦೬—ಭ. ಅ. ೧೫೫೩ |
| * ಗೊಟ್ಠೇಪಾಓವಗದೋ | ೨೨೪—ಭ. ಆ. ೧೫೫೬ |
| * ಚಂಪಾ ಏ ಮಾಸಖವಣಂ | ೧೪೬—ಭ. ಆ. ೧೫೪೬ |
| ಛಾಯೇವ ಸಕದಕಮ್ಮಂ | ೧೭೬ |
| * ಛಿಜ್ಜಉ ಭಿಜ್ಜವು | ೯೨, ೨೩೬—ಪರಪ್ಪ ೧-೭೨ |
| ಜಂ ಇಚ್ಛಸಿತಂಣಂತಂ | ೨೧೧ |
| ಜಂಜೇಣ ಮಂತೇಣ | ೧೨೮ |
| ಜಇ ಉಪ್ಪಜ್ಜಇ | ೧೮೬—ಮೂಲಾ ೨-೭೮ |
| * ಜದಿತಾ ಏವಂ | ೨೩೮—ಭ. ಆ. |
| * ಜಹ ಜಹ ಭುಂಜಇ | ೧೮೭—ಭ. ಆ. ೧೨೬೩ |
| * ಜಿಣವಯಣ ಮರುದ | ೨೩೮—ಭ. ಆ. |
| ಜಿಣವಯಣ ಮೋಸಹ | ೧೮೭—ಮೂಲಾ ೨-೯೫, ೯-೭೫ |


---

* ಈ ಗುರುತು ಇರುವ ಪದ್ಯಗಳ ಆಕರಗಳನ್ನು ಹೊತ್ತಗೆಯಲಿಗೆ ಕಂಡುಹಿಡಿದವರು ಡಾ. ಆ. ನೇ. ಉಪಾಧ್ಯೆ. ಎಂ. ಎ., ಡಿ. ಲಿಟ್. ಅವರು.

| | |
|---|---|
| ಜೀವಿದ ಮರಣೇ | ೧೯೮—ಮೂಲಾ ೧-೨೩ |
| * ಣಗರೇ ಮಹೇಂದ್ರ | ೨೧೯—ಭ. ಆ. ೧೫೫೫ |
| ಣೆಂದಂತಂ ಸಿಳಹಂತಂ | ೫೧, ೧೯೪ |
| * ಣಾವಾಏ ಣಿಬ್ಬುಡಾಏ | ೧೧೫—ಭ. ಆ. ೧೫೪೩ |
| ತಣಕಟ್ಠೇಣ ವ ಅಗ್ಗೀ | ೧೮೭—ಮೂಲಾ ೨-೮೦ |
| * ತಿಳೋಯ ಸಬ್ಬಜೀವಾಣಂ | ೪೫— ಪಂಚಾ ೧ |
| * ದಂಡೋ ಯಮುಣಾ | ೨೧೩—ಭ. ಆ. ೧೫೫೪ |
| * ದಂಸೇಹಿಯ ಘಸಕೇಹಿ | ೧೬೬—ಭ. ಆ: ೧೫೫೧ |
| ದುಜ್ಜಣವಯಣ ಸಡಗರಂ | ೧೯೭—ಮೂಲಾ ೯-೧೦೧ |
| ಪಾವೇಣ ಣಿರಯತಿರಿಯಂ | ೧೪೦ |
| ಪುವ್ವೇಣ ಅಂಗವಿಸಓ | ೧೩೦ |
| ಉವ್ವೇ ಮರಣಂ ಜಾಈ | ೧೮೬—ಮೂಲಾ ೨-೭೬ |
| ಪೆಚ್ಛಹ ಪೆಚ್ಛಹ | ೧೨೮ |
| * ಭಲ್ಲಕ್ಕಿಯೇಣ ಣಿಚ್ಚಂ | ೪೫—ಭ. ಆ. ೧೫೩೯ |
| ಭಾವಣಮೊಕ್ಕಾರಗದೋ | ೧೮೮ |
| * ಭೂಮೀಎ ಸಮಂ | ೯೪—ಭ. ಆ. ೧೫೪೧ |
| ಮಜ್ಜ ಸಹಾವಂ ಣಾಣಂ | ೯೨ |
| * ಮೊಗ್ಗಳ ಗಿರಿಮ್ಹಿಯ | ೭೬—ಭ. ಆ. ೧೫೪೦ |
| * ಯಿಂದಸಯ ವಂದಿಯಾಣಂ | ೪೫—ಪ್ರವಚ. ೧ |
| ಜೋಇಸುಸುರಾಸುರ | ೨೫ |
| ರಸಮಜ್ಜಮಾಂಸ | ೧೭೬ |
| * ರೋಹೇದಯಮ್ಮಿ ಸತ್ತೀಏ | ೧೫೯—ಭ. ಆ. ೧೫೪೯ |
| ವಸಈಏ ಪಳಿದಾಏ | ೨೩೭—ಭ. ಆ. ೧೫೫೭ |
| ಸಂಸಾರ ಚಕ್ಕವಾಳಮ್ಮಿ | ೧೮೭—ಮೂಲಾ ೨—೭೯ |
| ಸಣ್ಣಂ ವಾ ಬದರಂ | ೧೫೭ |
| ಸತ್ತಕ್ಖರ ಸಜ್ಝಾಯಂ | ೧೮೮ |
| ಸಮ್ಮದ್ದ ಸ್ಸಣಸುದ್ಧೋ | ೯೬ |
| ಸವ್ವೇಹಿ ಭವಣವಾಸೀ | ೧೯೯ |
| * ಸೀದೇಣ ಪುವ್ವವೇರಿಯ | ೧೫೦—ಭ. ಆ. ೧೫೪೭ |
| ಸೋ ಧಮ್ಮೋ ಜತ್ಥ | ೫೫, ೧೪೦, ೧೮೫ |
| * ಹತ್ಥಿಣಪುರ ಗುರುದತ್ತೋ | ೧೮೦—ಭ. ಆ. ೧೫೫೨ |
| * ಹಾ ದುಟ್ಠುಕಯಂ ಹಾ | ೧೪೯—ಪ್ರತಿಕ್ರ. ಪುಟ ೯೯ |


## (ii) ಸಂಸ್ಕೃತ


| | |
|---|---|
| ಅಚ್ಛೇದ್ಯೋನಂತ | ೧೫೩, ೧೭೬ |
| ಅಜ್ಞಾನಭಾವಾತ್ | ೧೮೬ |
| ಅರ್ಥಾನ್ಗೃಹೇಷು | ೧೮೭ |
| ಅರ್ಥೋ ಮೇ ಭಾರ್ಯಾ | ೧೮೩ |
| ಅನೇಕರಾಗ ಸಂಕೀರ್ಣಂ | ೧೧೧ |
| ಅನೃತವಚನೇ | ೧೩೧ |

| | |
|---|---|
| ಅಪವಾದೋ ಭವದ್ಯೇನ | ೧೪೭ |
| ಅಹೋ ಧನುಜಿ | ೧೦೧ |
| ಆಕೃಷ್ಟಯೇವ ವಚಸಾ | ೫೧ |
| ಆಜ್ಞಾಯಶೋ ಧೃತಿ | ೫೫ |
| * ಆದೌ ಜನ್ಮ ಜರಾರೋಗೌ | ೧೧೨—ಆದಿಪ್ರ, ಭಾಗ (ಗುಣಭದ್ರ) ೪೯-೧೬೯ |
| ಇಹ ಜೀವಕೃತಂ | ೧೮೬ |
| ಉದ್ದಂತ ಕುಬ್ಜ | ೫೪ |
| ಏತತ್ ಕ್ಷೇತ್ರಂ | ೧೮೪ |
| ಕರಜ ನಿವೇಶಿತ | ೧೭೦ |
| * ಕಸ್ಯ ಮಾತಾ ಪಿತಾ | ೧೮೬—ವರಾಂಗ ೧೫-೭೮ |
| ಕಾಲೇ ಸಂಪ್ರತಿವರ್ತತೇ | ೧೩೧ |
| ಕುಲಹೀನಂ ದೀನಮಾನಂ | ೫೪ |
| ಕೋ ಧರ್ಮಃಪ್ರವರೋ | ೧೪೬ |
| ಕ್ರಿಮಯಃ ಕಿಂ | ೧೪೭ |
| ಗುರುಮೂಲೇ ಯತಿನಿಕಟೇ | ೧೮೮ |
| ಚಾತಿಕ್ಷ್ಮಾಜತತೇ (?) | ೧೭೬ |
| ಡಿಂಡೀರ ಪಿಂಡ | ೧೭೬ |
| * ತೃಷ್ಣಾಂ ಛಿಂದಿ ಭಜ ಕ್ಷಮಾಂ | ೧೮೮—ಭ. ನೀ. ೭೭ |
| ದುರ್ಗಂಧೇ ದುರ್ಧರೇ | ೧೭೬ |
| ಧರ್ಮಾರ್ಥಕಾಮ | ೧೪೭ |
| * ನಮಃ ಶ್ರೀವರ್ಧಮಾನಾಯ | ೪೫—ರತ್ನಕ ೧ |
| ನಿರ್ವೀರ್ಯಾ ಪೃಥಿವೀ | ೧೩೧ |
| ನಿಶ್ಚಯಮುದಿತಸ್ಯ | ೧೮೫ |
| ನೀಲೋತ್ಪಲದಳಶ್ಯಾಮೇ | ೨೨೫ |
| ಪಾಪಾತ್ಕಿಲ ಜಾಯಂತೇ | ೫೪ |
| ಪುಣ್ಯಾದುತ್ಪಾದ್ಯಂತೇ | ೫೫ |
| ಪುಷ್ಪಫಲಭಾರ | ೧೮೫ |
| ಭವಿತವ್ಯಂ ಭವತ್ಯೇವ | ೧೦೨ |
| ಭೋಗಸ್ತೃಷ್ಣಾಗ್ನಿ | ೧೫೭ |
| ಮದ್ಯಾಂಗ ತೂರ್ಯಾಂಗ | ೨೦೮ |
| ಯತ್ರಯತ್ರೋಪ | ೧೮೩ |
| ಯತ್ನೇನ ಪಾಪಾನಿ | ೧೮೫ |
| * ಯದ್ಯಪಿ ನಿಷೇವ್ಯ | ೧೫೭, ೧೮೭—ಪ್ರಷರ ೧೦೭ |
| ಯದಿ ಜಾತಿಜರಾ | ೧೭೬ |
| * ಯಾವತ್ ಸ್ವಸ್ಥ | ೧೭೭—ಭ. ವೈ. ೮೮ |
| ಯೇನೇಯಂ ಕಂಪಿತಾ | ೨೨೫ |
| * ಯೇಷಾಂ ನ ವಿದ್ಯಾ | ೧೪೭—ಭ. ನೀ. ೧೩ |
| ರಾಜ್ಞಿ ಧರ್ಮಿಣಿ | ೧೬೨ |
| ರೂಪಂ ಯೌವನ | ೧೧೨, ೧೭೬ |
| ವರಯುವತಿ ಭವನ | ೫೫ |

ವೈರೂಪ್ಯಂ ದುರ್ಭಗತ್ವಂ ೫೪
ಶಕ್ಯಾಶಕ್ತಿ ೨೨೮
ಶಕ್ಯಾಹ್ಯೇಕಶರೀರೇಣ ೨೨೮
ಶ್ರೀವಕ್ಷಶ್ಚಾರು ರೂಪಂ ೫೫
ಸಂಗಂ ನೈವ ಹಿ ೨೨೯
ಸಂನ್ಯಸನೇಸ್ತಿ ೧೮೬
ಸಚಾಣಾಕ್ಯಃ ೨೨೭, ೨೨೮
ಸಮಾಗಮಾಃ ಸ್ವಾವಸ ೧೮೫
ಸ್ಯಮಕೋತ್ತಮ ೧೪೬
ಸಲವಣರಸಮಂಭೋ ೧೮೭
ಸುಖಿಸ್ಯಾನಂತರಂ ೧೪೫
ಸ್ಥಿತಸ್ಯ ವಾ ನಿಷಣ್ಣಸ್ಯ ೧೪೫

## (iii) ಕನ್ನಡ

ಆರೊಳಮಿಲ್ಲ ಮೋಹ ೧೮೬
ಆನಾಳ್ದನಾಳ್ಗಳ್ ೧೭೭
ಮರ್ದುಂ ಮಂತ್ರಮುಮಿ ೧೮೭
ಆವಾವ ಜನ್ಮಜನ್ಮ ೨೩೮
ಇಱುಕಿಱಿದನೊದಱಿ ೧೭೧
ಕಡಿಕಟಿವಮನುಡಿ ೧೭೧
ಪನಿಪುಲ್ಲ ಮುಗಿಲ ೧೫೭
ಬಡಿ ಕೊಲ್ ಕಟ್ಟಿಱಿ ೧೭೧
ಸಾವನಿತೊಂದವಸ್ಥೆ ೧೮೭

## ಸಂಕೇತಗಳ ವಿವರ.

ಅಜಿಪು — ಅಜಿತನಾಥಪುರಾಣ (ರನ್ನ)
ಅರ್ಧನೇ — ಅರ್ಧನೇಮಿ (ನೇಮಿಚಂದ್ರ)
ಆದಿ, ಆದಿಪು — ಆದಿಪುರಾಣ (ಪಂಪ)
ಕಕೋ — ಕಥಾಕೋಶ (ಹರಿಷೇಣ)
ಕಾದಂಬರಿಉ — ಕಾದಂಬರಿಯ ಉತ್ತರಭಾಗ (ನಾಗವರ್ಮ)
ಕಾಮಸೂ — ಕಾಮಸೂತ್ರ (ವಾತ್ಸ್ಯಾಯನ)
ಕಾವ್ಯಾಲೋ — ಕಾವ್ಯಾವಲೋಕನ (ನಾಗವರ್ಮ)
ಕುವ್ಯಾಉ — ಉದ್ಯೋಗಪರ್ವ (ಕುಮಾರವ್ಯಾಸ)
ಗದಾ — ಗದಾಯುದ್ಧ (ರನ್ನ)
ಗಿರಿಕಾ — ಗಿರಿಜಾಕಲ್ಯಾಣ ಕಾವ್ಯ (ಹರಿಹರ)
ಚಂದ್ರಪು — ಚಂದ್ರಪುರಾಣ (ಅಗ್ಗಳ)
ಚಾವುಂಡ — ಚಾವುಂಡರಾಯಪುರಾಣ (ಚಾವುಂಡರಾಯ)
ಜಗವಿ — ಜಗನ್ನಾಥವಿಜಯ (ರುದ್ರಭಟ್ಟ)
ಜೀವಸಂ — ಜೀವಸಂಬೋಧನೆ (ಬಂಧುವರ್ಮ)
ತ — ತಮಿಳು
ಪಂಪಭಾ — ಪಂಪಭಾರತ (ಪಂಪ)
ಪಂಪರಾ — ಪಂಪರಾಮಾಯಣ (ನಾಗಚಂದ್ರ)
ಪರಪ್ರ — ಪರಮಾತ್ಮಪ್ರಕಾಶ (ಜೋಯಿಂದು)
ಪು — ಪುಟ
ಪೂಹಗ — ಪೂರ್ವದ ಹಳಗನ್ನಡ
ಪ್ರಶರ — ಪ್ರಶಮರತಿಪ್ರಕರಣ (ಉಮಾಸ್ವಾತಿ)
ಪ್ರಾ — ಪ್ರಾಕೃತ
ಭ. ಆ. — ಭಗವತೀ ಆರಾಧನೆ (ಶಿವಕೋಟಿ)
ಭ. ನೀ. — ನೀತಿಶತಕ (ಭರ್ತೃಹರಿ)
ಭ. ವ. — ವೈರಾಗ್ಯಶತಕ (ಭರ್ತೃಹರಿ)
ಮೂಲಾ — ಮೂಲಾರಾಧನಾ (ವಟ್ಟಕೇಶ್ವರಸ್ವಾಮಿ)
ಲೀಲಾವ — ಲೀಲಾವತಿ (ನೇಮಿಚಂದ್ರ)
ವರಾಂಗ — ವರಾಂಗಚರಿತೆ (ಜಟಾಸಿಂಹನಂದಿ)
ಲೋಕೋಪ — ಲೋಕೋಪಕಾರ (ಚಾವುಂಡರಾಯ)
ಮಲ — ಮಲಯಾಳ
ಶಬ್ದವಿ — ಶಬ್ದವಿಹಾರ (ಡಿ. ಎಲ್. ನರಸಿಂಹಾಚಾರ್)
ಶಮದ — ಶಬ್ದಮಣಿದರ್ಪಣ (ಕೇಶಿರಾಜ)
ಶಾಂತೀಶ್ವ — ಶಾಂತೀಶ್ವರಪುರಾಣ (ಕಮಲಭವ)
ಸಂ — ಸಂಸ್ಕೃತ
ಸುಕುಮಾ — ಸುಕುಮಾರಚರಿತ್ರೆ (ಶಾಂತಿನಾಥ)



ಈ ಮೂಲದಲ್ಲಿರುವ ಕಥೆಗಳು ಒಂದೊಂದೇ ಗಾಹೆಯಲ್ಲಿ ನಿರೂಪಿತವಾಗಿವೆ. ಅವು ಅತಿ ಸಂಕ್ಷಿಪ್ತವಾಗಿವೆ; ಕಥೆಗಳ ಯಾವ ವಿವರಗಳೂ ಅಲ್ಲಿ ದೊರೆಯುವುದಿಲ್ಲ. ಹರಿಷೇಣನೂ ಕೋಗಳಿಯ ಶಿವಕೋಟಿಯೂ ಈ ಕಥೆಗಳನ್ನು ಸವಿಸ್ತಾರವಾಗಿಯೂ ಸಾಲಂಕಾರವಾಗಿಯೂ ನಿರೂಪಿಸಿದ್ದಾರೆ. ಹರಿಷೇಣನಿಗಿಂತ ಶಿವಕೋಟಿಯು ಹೆಚ್ಚು ವಿವರಗಳನ್ನು ಕೊಡುತ್ತಾನೆ. ಹರಿಷೇಣನು 'ಅಭಿನಂದನಮುನಿ ಕಥಾನಕ'ವನ್ನು ಅತಿ ಸಂಗ್ರಹವಾಗಿ ೮ ಶ್ಲೋಕಗಳಲ್ಲಿ ಯಾವ ವರ್ಣನೆಗೂ ಹೋಗದೆ ಸುದ್ದಿಯನ್ನು ತಿಳಿಸುವ ವರದಿಗಾರನಂತೆ ಹೇಳಿದ್ದಾನೆ. ಇದೇ ಕಥೆ 'ವಡ್ಡಾರಾಧನೆ'ಯಲ್ಲಿ "ಮಹೇಂದ್ರದತ್ತಾಚಾರ್ಯರ್ ಮೊದಲಾದ ಅಯ್ನೂರ್ವರ್ ರಿಸಿಯರ್ಕಳ ಕಥೆ" ಎಂಬ ಹೆಸರಿನಿಂದ ಸಪರಿಕರವಾಗಿ, ಸರಸವಾಗಿ, ಕುತೂಹಲಕಾರಕವಾಗಿ ಹೃದ್ಯವಾದ ಗದ್ಯದಲ್ಲಿ ಐದು ಪುಟಗಳಲ್ಲಿ ನಿರೂಪಿತವಾಗಿದೆ. ಆದ್ದರಿಂದ ಈ ಇಬ್ಬರು ಕವಿಗಳು ತಮಗೆ ಸಿಕ್ಕ ಮೂಲ ಸಾಮಗ್ರಿಯನ್ನು ತಮಗೆ ಇಷ್ಟ ಬಂದ ಹಾಗೆ ಬಳಸಿಕೊಂಡಿದ್ದಾರೆಂದು ಭಾವಿಸಬಹುದು. ಇವರಿಬ್ಬರಿಗೆ ಸಮಾನ ಮೂಲವೊಂದು ಇದ್ದಿತೆಂದೂ ಅದು 'ಭಗವತೀ ಆರಾಧನಾ' ಗ್ರಂಥಕ್ಕೆ ಇದ್ದಿರಬಹುದಾದ ಯಾವುದೋ ಪ್ರಾಕೃತ ವ್ಯಾಖ್ಯಾನವೆಂದೂ ಡಾ. ಆ. ನೇ. ಉಪಾಧ್ಯೆಯವರು ಕೆಲವು ಆಧಾರಗಳ ಮೇಲೆ ಊಹಿಸಿದ್ದಾರೆ. ಇದು ಅತ್ಯಂತ ಸಂಭವನೀಯವೆಂದೂ ಪರಿಗ್ರಾಹ್ಯಯೋಗ್ಯವೆಂದೂ ತೋರುತ್ತದೆ. ಈ ಮೂಲದಲ್ಲಿ ಒಂದೊಂದು ಗಾಹೆಯಲ್ಲೇ ಸೂಚಿತವಾಗಿದ್ದ ಕಥೆಗಳನ್ನು ವ್ಯಾಖ್ಯಾನದಲ್ಲಿ ವಿಸ್ತರಿಸಿ ನಿರೂಪಣೆ ಮಾಡಿದ್ದಿತೆಂದು ಹೇಳಬಹುದು. ಈ ವಿಸ್ತೃತ ಕಥೆಗಳನ್ನು ಕವಿಯ ದೃಷ್ಟಿಯಿಂದ ಹರಿಷೇಣನೂ ಶಿವಕೋಟಿಯೂ ನೋಡಿ ಅವುಗಳ ನಿರೂಪಣೆಯಲ್ಲಿ ತಮ್ಮ ಕೌಶಲ್ಯವನ್ನೂ ಪ್ರತಿಭೆಯನ್ನೂ ಪ್ರಕಾಶಪಡಿಸಿರುವರೆಂದು ತಿಳಿಯಬಹುದು... 'ವಡ್ಡಾರಾಧನೆ'ಯ ನಿರೂಪಣೆ, ಸಂನಿವೇಶ ನಿರ್ಮಾಣ, ಪಾತ್ರರಚನೆ, ರಸಾವಿಷ್ಕರಣ, ಗದ್ಯದ ರಮಣೀಯತೆ, ವಾಕ್ಯಗಳ ವೈವಿಧ್ಯ, ಧ್ವನಿ— ಇವೆಲ್ಲ ಹರಿಷೇಣನ ಕೃತಿಯಲ್ಲಿರುವುದಕ್ಕಿಂತ ಅಧಿಕ ಪ್ರಮಾಣದಲ್ಲೂ ಗುಣದಲ್ಲೂ 'ವಡ್ಡಾರಾಧನೆ'ಯಲ್ಲಿ ಇವೆಯೆಂದು ಸ್ಥಾಪಿಸಲು ಸಾಧ್ಯವಾಗುತ್ತದೆ. ಈ ತೌಲನಾತ್ಮಕ ದೃಷ್ಟಿಯಿಂದಲೇ ಈ ಕೃತಿಯ ಮೌಲ್ಯವಿಚಾರ ನಡೆಯಬೇಕಾಗಿದೆ.

— ಡಿ. ಎಲ್. ನರಸಿಂಹಾಚಾರ್

'ಪೀಠಿಕೆ'ಯಿಂದ

---

ಡಿ. ವಿ. ಕೆ. ಮೂರ್ತಿ : : ಪ್ರಕಾಶಕರು : : ಮೈಸೂರು ೪

ಬೆಲೆ : ರೂ. 45